**University of Mysore**

Oriental Library Publications
KANNADA SERIES No. 24

GENERAL EDITOR
M. S. BASAVALINGAYYA, M.A., B.L.
*Curator, Govt. Oriental Library, Mysore*

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

ಹತ್ತನೆಯ ಸಂಪುಟ

## ಶಲ್ಯ ಗದಾ ಪರ್ವಗಳು

THE

# KARNATAKA MAHĀBHĀRATA

BY

KUMĀRAVYĀSA

Vol. X

## SALYA AND GADA PARVAS

EDITED BY
THE KANNADA MAHABHARATA
EDITORIAL COMMITTEE

ASSISTED BY
HARANGACHAR, M.A., B.T.

(*Reprint*)

MYSORE:
PRINTED BY THE ASST. SUPDT. AT THE GOVT. BRANCH PRESS
1947

Price: Re. 1—0—0

University of Mysore

Oriental Library Publications
KANNADA SERIES No. 24

GENERAL EDITOR
M. S. BASAVALINGAYYA, M.A., B.L.
*Curator, Govt. Oriental Library, Mysore.*

ಕುಮಾರವ್ಯಾಸ ಮಹಾಕವಿ ವಿರಚಿತ

# ಕರ್ಣಾಟಕ ಮಹಾಭಾರತ

ಹತ್ತನೆಯ ಸಂಪುಟ

## ಶಲ್ಯ ಗದಾ ಪರ್ವಗಳು

THE

# KARNĀTAKA MAHĀBHĀRATA

BY

KUMĀRA VYĀSA

Vol. X

## SALYA AND GADA PARVAS

EDITED BY
THE KANNADA MAHĀBHĀRATA
EDITORIAL COMMITTEE

ASSISTED BY
N. ANANTHARANGACHAR, M.A., B.T.

---

MYSORE
PRINTED BY THE ASST. SUPDT. AT THE GOVT. BRANCH PRESS
1947

# ಮುನ್ನುಡಿ

ಮೈಸೂರು ಪ್ರಾಚ್ಯಕೋಶಾಗಾರದಿಂದ ಕುಮಾರವ್ಯಾಸವಿರಚಿತವಾದ ಕನ್ನಡ ಮಹಾಭಾರತವನ್ನು ಶೋಧಿಸಿ ಪ್ರಕಟಿಸಬೇಕೆಂದು ಈಗ ಸುಮಾರು ಮೂವತ್ತು ವರ್ಷಗಳ ಹಿಂದೆ ನಿಷ್ಕರ್ಷಿಸಿ ಮೊದಲನೆಯ ಸಂಪುಟವನ್ನು ೧೯೧೨ರಲ್ಲಿ ಪ್ರಸಿದ್ಧಿಪಡಿಸಿದರು. ಆಗ ಕೋಶಾಗಾರದ ಪಂಡಿತರಾಗಿದ್ದ ಶ್ರೀಮಾನ್ ವಿ. ಶ್ಯಾಮಾಚಾರ್ಯರು ಸಂಶೋಧನೆಯ ಕಾರ್ಯವನ್ನು ವಹಿಸಿ ಮೊದಲನೆಯ ನಾಲ್ಕು ಸಂಪುಟಗಳನ್ನು ಪ್ರಕಟಿಸಿದರು. ಅವರ ತರುವಾಯ ಪ್ರಾಚ್ಯಕೋಶಾಗಾರದ ಕನ್ನಡಪಂಡಿತರಾದ ಶ್ರೀಮಾನ್ ಟಿ.ಎನ್. ಸುಬ್ಬರಾಯಶಾಸ್ತ್ರಿಗಳು ಮಹಾಭಾರತದ ವಿರಾಟಪರ್ವ ಉದ್ಯೋಗಪರ್ವಗಳನ್ನೊಳಗೊಂಡ ಐಯ್ದು ಆರನೆಯ ಸಂಪುಟಗಳನ್ನು ಪರಿಷ್ಕರಿಸಿದರು.. ೧೯೩೧ನೆಯ ವರ್ಷದಲ್ಲಿ ಪ್ರಾಚ್ಯಕೋಶಾಗಾರದ ಸಮಿತಿಯವರು ಮುಂದಿನ ಭಾಗವನ್ನು ಅಂದರೆ ಮಹಾಭಾರತದ ಯುದ್ಧಪಂಚಕದ ಭಾಗವನ್ನು ಸಂಶೋಧಿಸುವುದಕ್ಕಾಗಿ ಶ್ರೀಮಾನ್‌ಗಳಾದ ಬಿ. ಎಂ ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಟಿ. ಎಸ್. ವೆಂಕಣ್ಣಯ್ಯ, ಎಂ.ಎ., ಡಿ. ಶ್ರೀನಿವಾಸಾಚಾರ್ಯ, ಎಂ.ಎ., ತೀ. ನಂ. ಶ್ರೀಕಂಠಯ್ಯ, ಎಂ.ಎ., ಇವರುಗಳನ್ನೊಳಗೊಂಡ ಒಂದು ಸಂಪಾದಕ ಮಂಡಲಿಯನ್ನೇರ್ಪಡಿಸಿದರು. ಶೋಧನೆಯ ಕಾರ್ಯದಲ್ಲ ಕೋಶಾಗಾರದ ಕನ್ನಡ ಪಂಡಿತರಾಗಿದ್ದ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯ, ಎಂ.ಎ., ಮತ್ತು ಶ್ರೀಮಾನ್ ಎಚ್. ಆರ್. ರಂಗಸ್ವಾಮಯ್ಯಂಗಾರ್ಯ, ಎಂ.ಎ., ಅವರು ನೆರವಾದರು. ಭೀಷ್ಮಪರ್ವವು ಅಚ್ಚಿಗೆ ಸಿದ್ಧವಾಗಿರುವಷ್ಟರಲ್ಲಿಯೇ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರಿಗೆ ಮಹಾರಾಜರವರ ಕಾಲೇಜಿಗೆ ವರ್ಗವಾದುದರಿಂದ ಅವರ ಸ್ಥಾನಕ್ಕೆ ಬಂದ ಶ್ರೀಮಾನ್ ಎನ್. ಅನಂತರಂಗಾಚಾರ್ಯ, ಎಂ.ಎ., ಬಿ.ಟಿ., ಅವರು ಮುಂದಿನ ಕಾರ್ಯಭಾರವನ್ನು ವಹಿಸಿದರು. ೧೯೩೩ರಲ್ಲಿ ಸಂಪಾದಕಮಂಡಲಿಯು ಭೀಷ್ಮಪರ್ವವನ್ನು ಶೋಧಿಸಿ ಪ್ರಕಟಿಸಿತು. ೧೯೩೬ರಲ್ಲಿ ದ್ರೋಣಪರ್ವವು ಪ್ರಕಟವಾಯಿತು. ಇದಾದ ಸ್ವಲ್ಪಕಾಲದಲ್ಲಿಯೇ ಸಂಪಾದಕ ಮಂಡಲಿಯ ಸದಸ್ಯರುಗಳಾದ ಶ್ರೀಮಾನ್ ಡಿ. ಶ್ರೀನಿವಾಸಾಚಾರ್ಯರು ವಿಶ್ರಾಂತಿಯನ್ನು ಪಡೆದುದರಿಂದಲೂ, ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರು ಸ್ವರ್ಗಸ್ಥರಾದುದರಿಂದಲೂ, ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ., ಶ್ರೀಮಾನ್ ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್., ಆಸ್ಥಾನ ಧರ್ಮಾಧಿಕಾರಿ ತಿರುವಳ್ಳೂರು ಶ್ರೀನಿವಾಸರಾಘವಾಚಾರ್ಯ,— ಇವರುಗಳನ್ನು ಹೊಸದಾಗಿ ಸಂಪಾದಕಮಂಡಲಿಯ ಸದಸ್ಯರನ್ನಾಗಿ ನಿಯಮಿಸಲಾಯಿತು. ಈ ಸಮಿತಿಯವರು ೧೯೪೦ರಲ್ಲ ಕರ್ಣಪರ್ವವನ್ನು ಶೋಧಿಸಿ ಪ್ರಕಟಿಸಿದರು. ಈಚೆಗೆ ಶ್ರೀಮಾನ್ ತಿರುವಳ್ಳೂರು ಶ್ರೀನಿವಾಸ ರಾಘವಾಚಾರ್ಯರು ಮತ್ತು ಶ್ರೀಮಾನ್ ಎಂ. ಎಸ್. ಬಸವಲಿಂಗಯ್ಯನವರು ದಿವಂಗತರಾದುದರಿಂದ ಶಲ್ಯ ಗದಾಪರ್ವಗಳನ್ನು ಸಂಪಾದಕಮಂಡಲಿಯ ಇತರ ಸದಸ್ಯರು ಶೋಧಿಸಿ ಪ್ರಕಟಿಸಿದ್ದಾರೆ.

ಯುದ್ಧಪಂಚಕದ ಮೊದಲ ಮೂರು ಪರ್ವಗಳ ಶೋಧನೆಗೆ ಉಪಯೋಗಿಸಿದ ಕೈಬರಹದ ಪ್ರತಿಗಳನ್ನೇ ಈಗಲೂ ಉಪಯೋಗಿಸಿಕೊಂಡಿದೆ. ಆದರೆ ಅವುಗಳಲ್ಲಿ (ಚ) ಪ್ರತಿಯು ದೊರಕದುದರಿಂದಲೂ (ನ) ಪ್ರತಿಯಲ್ಲಿ ಈ ಭಾಗವು ಇಲ್ಲದುದರಿಂದಲೂ ಅವುಗಳನ್ನು ಬಿಟ್ಟಿದೆ. ಉಳಿದ ಪ್ರತಿಗಳಲ್ಲಿ (ಫ. ತ. ಪ. ಬ.) ಪ್ರತಿಗಳನ್ನು ಬಿಟ್ಟು ಮಿಕ್ಕವು ಕೋಶಾಗಾರದಲ್ಲಿರತಕ್ಕವು. (ಫ) ಎಂಬುದು ಶಾಸನದ ಇಲಾಖೆಯ ಪಂಡಿತರಾದ ಶ್ರೀಮಾನ್ ಆರ್. ರಾಮಾನುಜ ಚಕ್ರವರ್ತಿಗಳು ಕೊಟ್ಟದ್ದು. (ತ) ಎಂಬುದು ಗೌಜುಘಟ್ಟದ ಗಣೇಶಭಟ್ಟರಿಂದ ಬಂದ ಪ್ರತಿ; (ಪ) ಮತ್ತು (ಬ) ಎಂಬುವು ಕ್ರಮವಾಗಿ ಮದ್ರಾಸ್ ಪ್ರಾಚ್ಯಕೋಶಾಗಾರದ ೧೬–೮–೧೦ ಮತ್ತು ೧೮–೧–೨೦ನೆಯ ನಂಬರಿನ ಪ್ರತಿಗಳು

ಕೋಶಾಗಾರದ ಪ್ರತಿಗಳಲ್ಲಿ :—

(ಕ)—ಇದು ಕೆ. ೨೦೫ನೆಯ ನಂಬರಿನ ಓಲೆಯ ಪ್ರತಿ. ಕ್ರಿ. ಶ. ೧೫೪೪ರಲ್ಲಿ ಪ್ರತಿಯಾದುದು. ಇದುವರೆಗೆ ನಮಗೆ ದೊರೆತಿರುವ ಕನ್ನಡ ಮಹಾಭಾರತದ ಕೈಬರಹದ ಪ್ರತಿಗಳಲ್ಲಿ ಇದೇ ಅತ್ಯಂತ ಪ್ರಾಚೀನವಾದುದು.

(ಖ)—ಇದು ಕೆ. ೫೪೧ನೆಯ ನಂಬರಿನ ಓಲೆಯ ಪ್ರತಿ. ಸಾಮಾನ್ಯವಾಗಿ ಶುದ್ಧವಾಗಿದೆ.

(ಗ)—ಇದು ಕೆ ೭೦ನೆಯ ನಂಬರಿನ ಓಲೆಯ ಪ್ರತಿ. ಶಾ. ಶ. ೧೭೬೩ರಲ್ಲಿ ಪ್ರತಿಯಾದುದು.

(ಟ)—ಇದು ಕೆ. ೨೫೧ನೆಯ ನಂಬರಿನ ಓಲೆಯ ಪ್ರತಿ.

(ದ)—ಇದು ಕೆ. ೧೬೩ನೆಯ ನಂಬರಿನ ಓಲೆಯ ಪ್ರತಿ.

ಹಿಂದಿನ ಪರ್ವಗಳಂತೆ ಈ ಪರ್ವವನ್ನು ಶೋಧನೆ ಮಾಡುವುದರಲ್ಲಿಯೂ ಎಲ್ಲ ಪ್ರತಿಗಳಲ್ಲಿಯೂ ದೊರೆಯುವ ಪದ್ಯವನ್ನೇ ಮೂಲಪಾಠವನ್ನಾಗಿಟ್ಟುಕೊಂಡು ಕೆಲವು ಪ್ರತಿಗಳಲ್ಲಿ ಮಾತ್ರ ದೊರೆಯುವ ಪದ್ಯಗಳನ್ನು ಪುಟದಡಿಯಲ್ಲಿ ಕೊಟ್ಟಿದೆ.

ಪಾಠಗಳನ್ನು ಶೋಧಿಸುವುದಕ್ಕೆ ಪ್ರತಿಗಳನ್ನು ದಯವಿಟ್ಟು ಕೊಟ್ಟು ಸಹಾಯಮಾಡಿದ ಎಲ್ಲ ಮಹನೀಯರಿಗೂ ಪ್ರಾಚ್ಯಕೋಶಾಗಾರವು ಋಣಿಯಾಗಿದೆ.

ಯುದ್ಧಪಂಚಕದ ಶಬ್ದಕೋಶವನ್ನೂ ಮಹಾಭಾರತದ ಉಪೋದ್ಘಾತವನ್ನೂ ಪ್ರತ್ಯೇಕವಾಗಿ ಪ್ರಕಟಿಸಬೇಕೆಂಬ ಉದ್ದೇಶವಿದೆ.

---

## ಎರಡನೆಯ ಮುದ್ರಣ

ಈ ಗ್ರಂಥದ ಮೊದಲನೆಯ ಮುದ್ರಣದ ಪ್ರತಿಗಳೆಲ್ಲವೂ ಮುಗಿದು ಹೋದುದರಿಂದಲೂ, ಇದು ಅನೇಕ ಸಂಸ್ಥೆಗಳಲ್ಲಿ ಪಠ್ಯಪುಸ್ತಕವಾಗಿರುವುದರಿಂದಲೂ, ಇದನ್ನು ಎರಡನೆಯ ಆವೃತ್ತಿ ಮುದ್ರಿಸಿ ಪ್ರಕಾಶಪಡಿಸಿದೆ.

ಮೈಸೂರು, 20–6–47. } **ಎಚ್. ಆರ್. ರಂಗಸ್ವಾಮಿಯ್ಯಂಗಾರ್,**
**ಸೂಪರಿಂಟೆಂಡೆಂಟ್, ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್.**

# ವಿಷಯಾನುಕ್ರಮಣಿಕೆ

---

## ಶಲ್ಯಪರ್ವ.



## ಗದಾಪರ್ವ



---

# ಕನ್ನಡ ಮಹಾಭಾರತ

## ಶಲ್ಯಪರ್ವ

### ಮೊದಲನೆಯ ಸಂಧಿ

ಸೂಚನೆ॥ ರಾಯ ಕೇಳ್ಕೈ ಕದನದಲಿ ರಾ
ಧೇಯನವಸಾನದಲಿ ಕೌರವ
ರಾಯದಳಪತಿಯಾಗಿ ಹೊಕ್ಕನು ಶಲ್ಯನಾಹವವ॥

ಹೇಳರೇ ಭೀಷ್ಮಾದಿ ಹಿರಿಯರು
ಮೇಲುದಾಯವ ಬಲ್ಲವರು ಹೆ
ಚ್ಚಾಳುತನದಲಿ ಹಿಗ್ಗಿ ಕಂಡಿರೆ ಜಯದ ಜಾಱುಗಳ।
ಮೇಲಣಾಹವದೊಳಗೆ ದೇಹವ
ಬೀಳುಕೊಂಡನು ಶಲ್ಯನಲ್ಲಿಂ
ಮೇಲೆ ದೊರೆಗೇನಾದುದೆಂಬುದನಱಿಯೆ ನಾನೆಂದ॥ ೧

ಮರುಳೆ ಸಂಜಯ ಗಾಳಿಯಲಿ ಕುಲ
ಗಿರಿಯ ಬೈಸಿಕೆ ಬಿಚ್ಚಿದಡೆ ಹುಲು
ಮೊರಡಿಗಳ [1]ಬಿಗುಹೇ[1]ನು ಬೀತುದು ಕರ್ಣನೊಡ್ಡವಣೆ।
ಕುರುಪತಿಯ ಪಾಡೇನು ಮಾದ್ರೇ
ಶ್ವರನ ಮತ್ಸರವೇನು ಸಾಕಂ
ತಿರಲಿ ಸವೞಿತೆ ಕೌರವಾನ್ವಯವೆಂದನಂಧನೃಪ॥ ೨

ಬೇಯದೆನ್ನೆದೆ ಶೋಕವಹ್ನಿಯ
ಬಾಯಲಕಟಾ ಕರ್ಣ ಕೌರವ
ರಾಯನಳಿವಿನಲುಳಿವ ಪುತ್ರದ್ರೋಹಿಯಾರಿನ್ನು।
ಸಾಯಿಸುವ ಸಾವಂಜಿತೆನಗೆ ಚಿ
ರಾ[2]ಯು ತೊಡರಿಕ್ಕಿ[2]ದೆನು ಮಾರ್ಕಂ
ಡೇಯ ಮುನಿಗೆಂದರಸ ಧೊಪ್ಪನೆ ಕೆಡೆದನವನಿಯಲಿ॥ ೩

---

[1] ಪಾಡೇ (ಕ.ಟ.ತ.ದ). [2] ಯುಗಡಲೊಡ್ಡಿ (ಷ).

ಹದುಳಿಸೈ ರಾಜೇಂದ್ರ ನೀ ಬಿ
ತ್ತಿದ ವಿಷದ್ರುಮ ಫಲಿತವಾಯಿತು
ಬೆದಱಲೇಕಿನ್ನನುಭವಿಸು ಸಾಕುಳಿದ ಮಾತೇನು।
ಕದನದಲಿ ಸುತನಿಧಿಯ ಹೋಗಾ
ಡಿದೆ ನಿಜಾನ್ವಯ ಕಲ್ಪತರುವನು
ಮದಕರಿಗೆ ಮಾಱಿದೆಯೆನುತ ನೆಗಹಿದನು ಭೂಪತಿಯ॥ ೪

ಮಲಗಿಸಿದನೊಱವೇಳ್ವ ನಯನ
[1]ಸ್ಥಳವ[1] ನೇವರಿಸಿದನು ಶೋಕಾ
ನಲನ ತಾಪಕೆ ತಂಪನೆಱೆದನು ನೀತಿಮಯರಸದ।
ಅಳಲ[2]ಶ್ರವ[2]ಮಾಡಿದೆ ನದೀಸುತ
ನಳಿವಿನಲಿ ಗುರು ಕರ್ಣ ಶಲ್ಯರ
ಕಳಿವಿನಲಿ ಕಟ್ಟಳಲ ಬಹ[3][ಳಾ][3]ಭ್ಯಾಸಿ ನೀನೆಂದ॥ ೫

ಅಹುದು ಸಂಜಯ ಶೋಕಶಿಖಿ ನೆಱೆ
ದಹಿ[4]ಸಿತೆ[4]ನ್ನನು ಬೆಂದ ವಸ್ತುಗೆ
ದಹನವುಂಟೇ ಎಂಬ ನಾಣ್ಣುಡಿ ನಮ್ಮೊಳಾದುದಲಾ।
ಮಿಹಿರಸುತ ಪರಿಯಂತ ಕಥೆ ನಿ
ರ್ವಹಿಸಿ ಬಂದುದು ಶಲ್ಯಕೌರವ
ರೆಹಗೆ [5]ನೆಗಳಿದರರದನು[5] ವಿಸ್ತರವಾಗಿ ಹೇಳೆಂದ॥ ೬

ತಗೆದುದಾಚೆಯುಲವರ ಬಲ ಜಗ
ದಗಲದುಬ್ಬಿನ [6]ಬೊಬ್ಬೆಯಲಿ ಮೊರೆ
ಮುಗಿಲಮದದಂದದ[6]ಲಿ ಮೊಳಗುವ ವಾದ್ಯರಭಸದಲಿ।
ಬಿಗಿದ ಮೋನದ ಬೀತ ಹರುಷದ
ಹೊಗೆವ ಮೋಱೆಯ ಹೊತ್ತುವೆದೆಗಳ
ದುಗುಡದೊಗ್ಗಿನ [7]ನಮ್ಮ[7] ಮೋಹರ ತೆಗೆದುದೀಚೆಯಲಿ॥ ೭

ಸಿಡಿದು ಕರ್ಣನ ತಲೆ ಧರಿತ್ರಿಗೆ
ಕೆಡೆಯೆ ಧೊಪ್ಪನೆ ಮೂರ್ಛೆಯಲಿ ನೃಪ
ಕೆಡೆದು ಕಣ್ಮುಚ್ಚಿದನು ಶೋಕಜ್ವರದ [8]ಧಗೆ ಜಡಿಯೆ[8]।

---

[1] ದ ಜಲವ (ಕ). [2] ಶಮ (ಕ). [3] ಳ (ಸ). [4] ಸದೆ (ತ). [5] ನೆಗ್ಗಿದರೆಂದು (ತ). [6] ಕೊಬ್ಬಿನಲಿ ಮೋಡದದಲುಗಿವ ಸಿಡಿಲಂದದಲ (ತ). [7] ನಿನ್ನ (ತ.ಪ). [8] ಝಳಹೊಯ್ದು (ಟಿ.ದ).

ಹಡಪಿಗರು ಚಾಮರದ ಚಾಹಿಯು
ರೊಡನೆ ನೆಲಕುರುಳಿದರು ಸಾರಥಿ
ಕಡಿಯಣದ ಕುಡಿನೇಣ ಕೊಂಡನು ತಿರುಹಿದನು ರಥವ ॥ ೮

[1]ಬಂದು[1] ಕರ್ಣನ ಹಾನಿ ಕೌರವ
ವೃಂದವನು ವೇಢ್ಯಿಸಿತೇ ಹಾ
ಯೆಂದು ಕೃಪಗುರುಸುತರು ರಥವನು ಬಿಟ್ಟು ಸೂಠಿಯಲಿ।
ತಂದು ಬಾಚಿಸಿದರಸನಿರವೆಂ
ತೆಂದುಸುರನಾರ್ಯೈದು ವಿಧಿಯನು
ನಿಂದಿಸಿದರವಧಾನ ಜೀಯವಧಾನ ಜೀಯೆನುತ ॥ ೯

ತಳಿತಳಿದು ಪನ್ನೀರನಕ್ಷಿಗೆ
ಚೆಳೆಯುವನು ಹಿಡಿದೆತ್ತಿ ಗುರುಸುತ
ಮಲಗಿಸಿದಡೇನಯ್ಯ ಕರ್ಣ ಎನುತ್ತ ಕಂದೆಱೆದು ।
ಘಳಿಲನೆದ್ದನು ಕರ್ಣ ತೆಗೆಸ್ಯೆ
ದಳವನಿರುಳಾಯ್ತೆಂದು ಶೋಕದ
ಕಳವಳದಲರೆಮುಚ್ಚುಗಣ್ಣಲಿ ಮತ್ತೆ [2]ಮೈಮಱೆದ[2]॥ ೧೦

ರಾಯ ಹದುಳಿಸು ಹದುಳಿಸಕಟಾ
ದಾಯಿಗರಿಗೆಡೆಗೊಟ್ಟಲಾ ನಿ
ರ್ದಾಯದಲಿ ನೆಲ ಹೋಯ್ತು ಭೀಮನ ಭಾಷೆ ಸಂದುದಲಾ।
ವಾಯುಜನ ಜಠರದಲಿ ತೆಗೆಯಾ
ಜೀಯ ನಿನ್ನನುಜರನು ಪಾರ್ಥನ
ಬಾಯಲುಗಿ ಸೂತಜನನೆಂದರು ಜಱೆದು ಕುರುಪತಿಯ॥ ೧೧

ಏನು ಗುರುಸುತ ಮಡಿದನೇ ತ
ನ್ನಾನೆ ಬವರದಲಕಟ [3]ಕುಂತೀ[3]
ಸೂನುವೇಕ್ಕೆ ತಪ್ಪ ಮಾಡಿದನೇ ಮಹಾದೇವ।
ಭಾನುಸನ್ನಿಭ ಸರಿದನೇ ತ
ಪ್ಪೇನು ಪಾರ್ಥನ ಬಸುಱಲೆನ್ನ ನಿ
ಧಾನವಿದ್ದುದು ತೆಗೆವೆನ್ನೆಸಲೆಯೆಂದು ಕಂದೆಱೆದ ॥ ೧೨

---

[1] ಬೆಂದ (ತ). [2] ಪವಡಿಸಿದ (ಕ). [3] ಸುರಪನ (ತ).

ತಾಪವಡಗಿತು ಮನದ ಕಡುಹಿನ
ಕೋಪ ತಳಿತುದು ಭೀಮ ಪಾರ್ಥರ
ರೂಪು ಮುಖದಲಿ ಕರ್ಣ ದುಶ್ಶಾಸನರ ಕಲ್ಪಿಸಿದ।
ಭೂಪ ಕೇಳೈ ಪಾಳಯಕೆ ಕುರು
ಭೂಪ ಬಂದನು ನಾಳೆ [1]ಕರ್ಣೋ
ತ್ಥಾಪನ[1]ವಲಾ ಎನುತ ಹೊಕ್ಕನು ಭದ್ರಮಂಟಪವ॥ ೧೩

ಶಕುನಿ ಕೃಪ ಗುರುಸೂನು ಕೃತವ
ರ್ಮಕ ಸುಕೇತು ಸುಶರ್ಮ ಸಮಸ
ಪ್ತಕರು ಮಾದ್ರೇಶ್ವರ ಸುಬಾಹು ಸುನಂದ ಚಿತ್ರರಥ।
ಸಕಲ ಸುಭಟರು ಸಹಿತ ದಳನಾ
ಯಕರು ಬಂದರು ಕರ್ಣಹಾನಿ
ಪ್ರಕ[2]ಟಕಳಿತಶಿರೋವಕುಂಠನ ವೈಮನಸ್ಯದಲಿ[2]॥ ೧೪

ಹಿಮದ ಹೊಯ್ಲಲಿ ಸೀದು ಸಿಕ್ಕಿದ
ಕಮಲವನದಂದದಲಿ ಹತವಿ
ಕ್ರಮದ ಕೀರ್ತಿಯ ಬಹಳಭಾರಕೆ ಬಳುಕಿದಾನನದ।
ಸುಮುಖತಾವಿಚ್ಛೇದಕಲುಷ
ಸ್ವಾಮಿತರಿರವನು ಕಂಡು ನಾಳಿನ
ಸಮರಕೇನುದ್ಯೋಗವೆಂದನು ಕೃಪನ ಗುರುಸುತನ॥ ೧೫

ಅರಸ ಕರ್ಣಚ್ಛೇದವೇ ಜಯ
ಸಿರಿಯ ನಾಸಚ್ಛೇದವಿನ್ನ[3]ರ[3]
ವರಿಸದಿರು ಹೊಯ್ದಾಡಿ ಹೊಗಳಿಸು ಬಾಹುವಿಕ್ರಮವ।
ಗುರುನದೀಸುತರಳಿದ ಬಳಿಕೀ
ಧರೆ[4]ಗೆ[4] ನಿನಗಸ್ವಾಮ್ಯ ಕರ್ಣನ
ಮರಣದಲಿ ನೀನರ್ಧದೇಹನು ಭೂಪ ಕೇಳೆಂದ॥ ೧೬

ಆ ವೃಕೋದರ ನರರೊಳಂತ
ರ್ಭಾವ ದುಶ್ಶಾಸನಗೆ ತನ್ನಯ
ಜೀವಸಖಗಾ ಭೀಮ ಪಾರ್ಥರ ಮರಣಸಿದ್ಧಿಯಲಿ।

---

[1] ಕದನೋದ್ಯಾಪನ (ಗ.ಫ), ಕರ್ಣಸ್ಥಾಪನ (ಖ.ಟ.ತ.ದ). [2] ರ ತಳಿತುದು ರೋಷಪಾವಕ ವೈಮನಸ್ಯದಲಿ (ಗ.ಟ.ದ.ಪ). [3] ಲ (ಕ), ರೆ (ತ). [4] ಯು (ತ).

ಕೈ [1]ವಿ[1]ಡಿಯಲೇ ಕರ್ಣನಿಹನೆಂ
ದಾವು ನಿಶ್ಚಯಿಸಿದೆವು ಕರ್ಣನ
ಸಾವ ನಾಳಿನೊಳಱಿವೆನೆಂದನು ನಿನ್ನ ಮಗ ನಗುತ ॥* ೧೭

ನಾವು ಹೊಯ್ದಾಡುವೆವು ಭುಜಸ
ತ್ತ್ವಾವಲಂಬವ ತೋಱುವೆವು ಕ
ರ್ಣಾವಸಾನವ ಕಂಡು ಬಳಿಕುಗುಳುವೆವು ತಂಬುಲವ।
ನೀವು ಸೇನಾಪತ್ಯವನು ಸಂ
ಭಾವಿಸಿರೆ ಸಾಕಿನ್ನು ಮಿಗಿಲಾ
ದೈವಕೃತ ಪೌರುಷವ ನಾಳಿನೊಳಱಿಯಬಹುದೆಂದ ॥* ೧೮

ಧರಣಿಪತಿ ಚಿತ್ತೈಸು ಸೇನಾ
ಧುರವನೀವುದು ಮದ್ರಭೂಪತಿ
ಗೆರವಲಾ ಜಯಲಕ್ಷ್ಮಿ ಬಳಿಕಾ ಪಾಂಡುತನಯರಿಗೆ।
ಸುರನದೀಜ ದ್ರೋಣ ರಾಧೇ
ಯರಿಗೆ ಸರಿಮಿಗಿಲೆಂದು ಮಾದ್ರೇ
ಶ್ವರನುಳಿಯೆ ದೊರೆಯಾರು ದಿಟ್ಟರು ನಮ್ಮ ಥಟ್ಟಿನಲಿ ॥ ೧೯

ನೀವು ಕಟಕಾಚಾರ್ಯಪುತ್ರರು
ನೀವಿರಲು ಕೃಪನಿರಲು ದಳವಾಯ್
ನಾವಹೆವೆ ನೀವಿಂದು [2]ತೇಜೋದ್ವಯದ[2]ಲಧಿಕರಲೆ।
ನಾವು ತಱುವಾಯವರೆನಲು ಜಯ
ಜೀವಿಗಳು ನೀವನ್ಯಗುಣಸಂ
ಭಾ[3]ವಕ[3]ರಲಾ ಎಂದನಶ್ವತ್ಥಾಮ ಶಲ್ಯಂಗೆ ॥† ೨೦

ಉಚಿತವಿತರೇತರಗುಣಸ್ತುತಿ
ರಚನೆ ಗುಣಯುಕ್ತರಿಗೆ ವಿಜಯೋ
ಪಚಿತ ರಣನಾಟಕಕೆ ಜವನಿಕೆಯಾಯ್ತಲೇ ರಜನಿ।
ಅಚಲವಮೂಱಱ ಪೈಸರದ ಬಲ
ನಿಚಯ ನಮ್ಮದು ವೀರ ಸುಭಟ
ಪ್ರಚಯ ಮುಖ್ಯರ ಮಾಡಿಯೆಂದನು ಕೃಪನು ಕುರುಪತಿಗೆ ॥ ೨೧

---

[1] ವ (ತ). * ಈ ಪದ್ಯಗಳು (ದ) ಪ್ರತಿಯಲ್ಲಿಲ್ಲ. [2] ತೇಜದ್ವಯ (ಕ), ತೇಜೋಮಯ (ಖ), ತೇಜೋದಯ (ತ). [3] ವಿತ (ಕ.ಘ). † ಈ ಪದ್ಯವು (ಟ.ದ.) ಪ್ರತಿಗಳಲ್ಲಿಲ್ಲ.

ಸುರನದೀಜ ದ್ರೋಣ ಕೃಪರೀ
ಕುರುಬಲಕೆ ಕಟ್ಟೊಡೆಯರವರಿ
ಬ್ಬರ ಪರೋಕ್ಷದಲಾರವಿಲ್ಲಿಯ ಹಾನಿವೃದ್ಧಿಗಳು।
ಗುರುಸುತನೊ ಶಲ್ಯನೊ ಚಮೂಪ
ಖ್ಯರನು ನೀವೇ ಬೆಸಸಿಯೆಂದನು
ಧರಣಿಪತಿ ಕೇಳೈ ಕೃಪಾಚಾರ್ಯಂಗೆ ಕುರುರಾಯ॥ ೨೨

ಆದಡಾ ಭೀಷ್ಮಾದಿ ಸುಭಟರು
ಕಾದಿ ನೆಗ್ಗಿದ ಕಳನ ಹೊಗುವಡೆ
ಕೈದುಕಾಱರ ಕಾಣೆನೀ ಮಾದ್ರೇಶ ಹೊಱ[1]ಗಾ[1]ಗಿ।
ಈ ದುರಂತ[2]ರ[2] ಸಮರಜಯ ನಿನ
ಗಾದಡೊಳ್ಳಿತು ಶಲ್ಯನಲಿ ಸಂ
ಪಾದಿಸಿರೆ ಸೇನಾಧಿಪತ್ಯವ[3]ನರಸ ಕೇಳೆಂದ[3]॥ ೨೩

ತರಿಸಿ ಮಂಗಳವಸ್ತುಗಳನಾ
ದರಿಸಿ ಭದ್ರಾಸನದಲೀತನ
ನಿರಿಸಿ ನೃಪ ವಿಸ್ತರಿಸಿದನು ಮೂರ್ಧಾಭಿಷೇಚನವ।
ಮೊರೆವ ವಾದ್ಯದ ಸಿಡಿಲ ಧರಣೀ
ಸುರರ ಮಂತ್ರಾಕ್ಷತೆಯ ಮಳೆಗಳೊ
ಳಿರುಳನುಗಿದುವು ಮಕುಟಮಣಿ[4]ರಾಜಿ[4]ಗಳ ಮಿಂಚುಗಳು॥ ೨೪

ಆದುದುತ್ಸವ ಕರ್ಣಮರಣದ
ಖೇದ[5]ವಕ್ಕಿತು[5] ಹಗೆಗೆ ಕಾಲ್ದೊಳೆ
ಯಾದ ವೀರ[6]ರಸಾ[ಬ್ಧಿ][6] ನೆಲೆದಪ್ಪಿತ್ತು ನಿಮಿಷದಲಿ।
ಬೀದಿವರಿದುದು ಬಿಂಕ ನನೆಕೊನೆ
ವೋದುದಾಶಾಬೀಜ ಲಜ್ಜೆಯ
ಹೋದ ಮೂಗಿಗೆ ಕದಪ ಹೊಯ್ದನು ನಿನ್ನ ಮಗನೆಂದ॥ ೨೫

ಕಾಣಿಕೆಯನಿತ್ತಖಿಳ [7]ಸುಭಟ[7]
ಶ್ರೇಣಿ ಕಂಡುದು ನುಡಿಯ ಹಾಣಾ
ಹಾಣಿಗಳ [8]ಭಾಷೆಗಳ ಹಕ್ಕಲು[8] ವೀರರುಕ್ಕುಗಳ।

---

[1] ತಾ (ದ.ಪ). [2] ದ (ಖ). [3] ನೆಂದನಾದ್ರೌಣಿ (ಕ). [4] ರೋಚಿ (ತ). [5] ವಡಗಿತು (ಗ.ಟ.ದ), ವಳುಕಿತು (ತ). [6] ರಸಾಭಿ (ಕ), ಸಮುದ್ರ (ಖ.ಗ.ಘ.ತ.ಪ). [7] ಧೂಪ (ತ). [8] ಧಾರಿಂಗಳ ಹೊಣಕೆಯ (ಟ.ದ).

ಪ್ರಾಣಚುಳಕೋದ[1]ಕ[1]ದ ಚೇಷ್ಟೆಯ
ಹೂಣಿಗರು ವಿಜಯಾಂಗನೋಪ
ಕ್ಷೀಣಮಾನಸರೊಪ್ಪಿದರು ಕುರುಪತಿಯ ಪರಿವಾರ॥ ೨೬

ಪತಿಕರಿಸಿದೈ ವೀರಸುಭಟ
ಪ್ರತತಿಮಧ್ಯದಲೆಮ್ಮನಹಿತ
ಚ್ಯುತಿಗೆ ಸಾಧನವೆಂದು ನಿಜಸೇನಾಧಿಪತ್ಯದಲಿ।
ಕೃತಕವಿಲ್ಲದೆ ಕಾದುವೆನು ಯಮ
ಸುತನೊಡನೆ ಜಯಸಿರಿಗೆ ನೀನೇ
ಪತಿಯೆನಿಸಿ ತೋಱಿಸುವೆನೆಂದನು ಶಲ್ಯ ಕುರುಪತಿಗೆ॥* ೨೭

ಉಬ್ಬಿದನಲೈ ಮಧುರವಚನದ
ಹಬ್ಬದಲಿ ನಿನ್ನಾತನಿತ್ತಲು
ತುಬ್ಬಿನವದಿರು ತಂದು ಬಿಸುಟರು ನಿಮ್ಮ ಪಾಳೆಯದ।
ಸರ್ಬ ವೃತ್ತಾಂತವನು ಗಾಢದ
ಗರ್ಭ ಮುಱಿದುದು ಕೃಷ್ಣರಾಯನ
ನೆಬ್ಬಿಸಿದನಿರುಳನಿಪತಿ ಬಿನ್ನೈಸಿದನು [2]ಹದನ[2]॥ ೨೮

ದೇವ ಚಿತ್ತೈಸಿದರೆ ಬೊಪ್ಪನ
ಭಾವನನು ಸೇನಾಧಿಪತ್ಯದ
ಲೋವಿದರಲೇ ಶಲ್ಯ ಮಾಡಿದ ಭಾಷೆ[3]ಯವರೊಡನೆ[3]।
ಆವನಂಘೈಸುವನೊ ಪಾರ್ಥನೊ
ಪಾವಮಾನಿಯೊ ನಕುಲನೋ ಸಹ
ದೇವನೋ ತಾನೋ ನಿದಾನಿಸಲಱಿಯೆ ನಾನೆಂದ॥ ೨೯

ಕಲಹವೆನ್ನದು ದಳಪತಿಗೆ ತಾ
ನಿಲುವೆನೆಂದನು ಭೀಮನೆನ್ನನು
ಕಳುಹಿ ನೋಡೆಂದನು ಧನಂಜಯನೆಮ್ಮ ಮಾಹನಲಿ।
ಸಲುಗೆಯೆನಗೆಂದನು ನಕುಲನೆ
ನ್ನೊಲವಿನ[4]ರ್ಥಿ[4]ಯಿದೆನ್ನ ಕಳುಹಿದ
ಡುಳುಹಿದವರೆಂದೆಱಗಿದನು ಸಹದೇವನಾ ಹರಿಗೆ॥* ೩೦

1 ಯ (ಕ). * ಈ ಪದ್ಯಗಳು (ಚ.ದ) ಪ್ರತಿಗಳಲ್ಲಿಲ್ಲ. 2 ನಗುತ (ಕ.ತ). 3 ನಮ್ಮೊಡನೆ (ಕ). 4 ರ್ಥಿ (ಸ.ಖ).

ಹಱಿಯದರ್ಜುನನಿಂದ ಭೀಮನ
ನೆಱವಣಿಗೆ ನೋಯಿಸದು ನಕುಲನ
ಹೊಱಗೆ[1]ಯೊದ[1]ಗದು ಸೈರಿಸದು ಸಹದೇವನಾಟೋಪ ।
ಇಱವಡಾ ಮಾದ್ರೇಶನನು ನೆಱೆ
ಮುಱವಡೆಯು ನಿನಗಹುದು ನಿನ್ನನು
ತಱುಬಿದವರೇ [2]ಕಷ್ಟ[2]ರೆಂದನು ನಗುತ ಮುರವೈರಿ ॥ ೩೧

ಲೇಸನಾಡಿದೆ ಕೃಷ್ಣ ಶಲ್ಯಂ
ಗೀಸು ಬಲುಹುಂಟಾದಡನುಜರು
ಘಾಸಿಯಾದರು ಹಿಂದೆ ಭೀಷ್ಮಾದಿಗಳ ಬವರದಲಿ ।
ಈ ಸಮರಜಯವೆನಗೆ ನಾಳಿನೊ
ಳ್ಳೈಸಲೇ ನಳ ನಹುಷ ಭರತ ಮ
ಹೀಶವಂಶೋತ್ಪನ್ನ ತಾನೆಂದನು ಮಹೀಪಾಲ ॥ ೩೨

ತಾಯಿ ಹೆಱಳೇ ಮಗನ ನಿನ್ನನು
ನಾಯಕನೆ ಲೋಕೈಕವೀರರ
ತಾಯಲಾ ನಿಮ್ಮವ್ವೆಯಾ ಪೊಲೆವಾಲ ಬಲುಹಿ[3]ನಲಿ[3] ।
ರಾಯ ನೀ ಕ್ಷತ್ರಿಯನು ಸೇಸೆಯ
ತಾಯೆನುತ ತೂಪಿಱಿದು ಕಮಲದ
ಳಾಯತಾಂಬಕನಪ್ಪಿಕೊಂಡನು ಧರ್ಮನಂದನನ ॥ ೩೩

ಸಂದವೈ ಹದಿನೇಳು ರಾತ್ರಿಗ
ಳಂದಿನಿರುಳಾ ಸೇನೆ ನಿರ್ಭಯ
ದಿಂದ ನಿದ್ರಾವ್ಯಸನ[4]ನಿರ್ಭರ[4]ಪೂರ್ಣಹರುಷದಲಿ ।
[5]ಸಂ[5]ದುದೀ ನಿನ್ನವರು ರಾಧಾ
ನಂದನವ್ಯಪಗಮನನಷ್ಟಾ
ನಂದ[6]ವಿಹ್ವಲಕರಣ[6]ರಿದ್ದರು ಭೂಪ ಕೇಳೆಂದ ॥ ೩೪

ಆ ಶಿಖಂಡಿಯು ತೋಱಿ ಸರಳಿನ
ಹಾಸಿಕೆಯಲೊಬ್ಬನನು ಮಾತಿನ
ವಾಶಿಯಿಂದೊಬ್ಬನನು ಮುನ್ನಿನ ಕುಲವನೆಚ್ಚಱಿಸಿ ।

---

1 ಯೋ (ಕ.ಖ.ತ), ಹೋ (ಟ.ದ). 2 ಕೆಡುವ (ಟ.ದ). 3 ದಲಾ (ಕ). 4 ವಿಹ್ವಲ (ಕ), ದುಃಖಿತ (ಘ), ನಿರ್ಭಯ (ದ). 5 ನಿಂ (ಕ). 6 ನಿರ್ಭರ ಹರುಷ (ಕ), ನಂತಃಕರಣ (ಟ.ದ).

ಘಾಸಿ ಮಾಡಿದನೊಬ್ಬನನು ಧರ
ಣೀಶಚೇಷ್ಟೆಯಲೊಬ್ಬನನು ಕೃಪೆ
ಯೇಸು ಘನವೋ ವೀರನಾರಾಯಣ[1]ಗೆ ಭಕ್ತರಲಿ[1] ॥ ೩೫

ಮೊದಲನೆಯ ಸಂಧಿ ಮುಗಿದುದು

---

[1] ನ ಭಕ್ತರಿಗೆ (ಕ.ಖ.ತ).

# ಎರಡನೆಯ ಸಂಧಿ

ಸೂಚನೆ॥ ಗಂಡುಗಲ ಕದನ ಪ್ರಚಂಡನ
ಖಂಡ ಭುಜಬಲ ಧರ್ಮಸುತ ಮುಂ
ಕೊಂಡು ರಣದಲಿ ಕಾದಿ ಗೆಲಿದನು ಮಾದ್ರ ಭೂಪತಿಯ ॥

ಒಳಗೆ ಧಗೆ ನಗೆ ಹೊಱಗೆ ಕಳವಳ
ವೊಳಗೆ ಹೊಱಗೆ ನವಾಯಿ ಡಿಳ್ಳಸ
ವೊಳಗೆ ಹೊಱಗೆ ಸಘಾಡಮದ ಬಲುಬೇಗೆಯೊಳಗೊಳಗೆ।
ಬಲುಹು ಹೊಱಗೆ ಪರಾ[1]ಭವ[1]ದ [2]ಕಂ[2]
ದೊಳಗೆ ಕಡುಹಿನ ಕಲಿತನದ ಹಳ
ಹಳಿಕೆ ಹೊಱಗೆ ಮಹೀಪ ಹದನಿದು ನಿನ್ನ ನಂದನನ॥ ೧

ನೆಗ್ಗಿದನು ಗಾಂಗೇಯನಮರರೊ
ಳೊಗ್ಗಿದನು ಕಲಿದ್ರೋಣನೆನ್ನವ
ನಗ್ಗಳಿಕೆಗೂಣೆಯವ ಬೆರಸಿದನೆನ್ನ ಬಿಂಬದಲಿ।
ಉಗ್ಗಡದ ರಣವಿದಕೆ ಶಲ್ಯನ
[3]ನಗ್ಗಿಸುವನೀ [3] ಕೌರವೇಶ್ವರ
ನೆಗ್ಗ ನೋಡುವೆನೆಂಬವೊಲು ರವಿಯಡರ್ದ ದಂಬರವ॥ ೨

ಸೂಳವಿಸಿದುವು [4]ಸನ್ನೆ[4]ಯಲಿ ನಿ
ಸ್ಸಾಳ ದಳಪತಿ ಕುರುಬಲದ ದೆ
ಖ್ಖಾಳವನು ನೋಡಿದನು ತೂಗಾಡಿದನು ಮಣಿಶಿರವ।
ಆಳು ನೆರೆದಿರೆ ನಾಲ್ಕುದಿಕ್ಕಿನ
ಮೂಲೆ ನೆಱೆಯದು ಮುನ್ನವೀಗಳು
ಪಾಳೆಯದ ಕಡೆವೀಡಿಗೈದದು ಶಿವಶಿವಾಯೆಂದ॥ ೩

ಗಜಕೆ ಗುಳ[5]ವನು ಬೀಸಿ ವಾಜಿ[5]
ವ್ರಜವ ಹಲ್ಲಣಿಸಿದರು ಗಾಲಿಯ
ಗಜಱು ಘೀಳಿಡೆ ನೊಗನ ಹೆಗಲಲಿ [6]ಕು[6]ಣಿದವಶ್ವಚಯ।

---

[1] ಕ್ರಮ (ಟಿ.ದ). [2] ಕುಂ (ಪ). [3] ನೆಗ್ಗಿಸಿದನೇ (ಘ), ಮಗ್ಗಿಸಿದನೇ (ನ). [4] ಲಗ್ಗೆ (ಟಿ.ದ). [5] ಬೀಸಿದುವು ತುರಗ (ಕ). [6] ಮ (ತ).

ಭುಜದ ಹೊಯ್ಲಿನ ಹರಿಗೆಗಳ ಗಜ
ಬಜದ ಬಲುಜೇವಡೆಯ ರವದ
ಕ್ಕಜದ ಕಾಲಾಳೊದಗಿತವನೀಪತಿಯ ಸನ್ನೆಯಲಿ॥ ೪

ಮೊರೆವ ಕಹಳಾರವದ ಡಿಂಡಿಮ
ಮುರಜ ಗೋಮುಖ ಪಟಹ ಜ
ರ್ಝರ ಕರಡೆ ಪಣವ ಮೃದಂಗ ಡಮರುಗ ಢಕ್ಕೆ ಡವುಡೆಗಳ।
ಬಿರಿಯೆ ನೆಲನಳ್ಳಿಱಿವ ವಾದ್ಯದ
ಹರುಷತರ ನಿರ್ಘೋಷದಬ್ಬರ
ಜ[1]ರಿ[1]ಹಿತಡಕಿಲು ಜಗದ ಜೋಡಿಯನರಸ ಕೇಳೆಂದ॥ ೫

ಮುಱಿದ ಬಲುಗುದುರೆಗಳ ಬಾದಣ
ಗೊಱೆದ ಮಯ್ಯಾನೆಗಳ ಹತ್ತಿಗೆ
ಹಱಿದ ಗಾಲಿಯ ರಥವ ಟ[2]ನ[2]ಕಡಿ[3]ವಡೆದ[3] ಕಾಲಾಳ।
ಅಱುಹಿದರು ಭೂಪತಿಗೆ ಸೇನೆಯ
ಲಱಿಸಿ ತೆಗೆದಾಯತ ಚತುರ್ಬಲ
ಹೊಱಗೆ ನಿಂದುದು ಹೊಗೆದೆಗೆದ ಕೇಸುರಿಯ ತಿರುಳಂತೆ॥ ೬

ಹತ್ತು ಸಾವಿರದೇಳುನೂಱಱು
ವತ್ತು ಗಜ ಹನ್ನೊಂದು ಸಾವಿರ
ಹತ್ತಿದವು ರಥವೆರಡು ಲಕ್ಕವನೆಣಿಸಿದರು ಹಯವ।
ಪತ್ತಿ ಮೂಱು ಕೋಟಿಯದು ಕೈ
ವರ್ತಿಸಿತು ದಳಪತಿಗೆ ಸಾಗರ
ಬತ್ತಲೆಡೆಯಲಿ ನಿಂದ ನೀರವೊಲಾಯ್ತು ಕುರುಸೇನೆ॥ ೭

ವೈರಿಬಲದೊಳಗಾಱು ಸಾವಿರ
ತೇರು ಗಜಘಟೆ ಮೂಱು ಸಾವಿರ
ವಾರುವಂಗಳನೆಣಿಸಿ ತೆಗೆದರು ಹತ್ತು ಸಾವಿರವ।
ವೀರಭಟಗಾಯ್ತೊಂದು ಕೋಟಿ ಮ
ಹೀರಮಣ ಕೇಳುಭಯಬಲ ವಿ
ಸ್ತಾರ ಹದಿನೆಂಟೆನಿಸಿದಕ್ಷೋಹಿಣಿಯ [4]ಶೇಷವಿದು[4]॥ ೮

---

[1] ರು (ಖ). [2] ನಿ (ಕ.ಖ.ದ). [3] ಗಳೆದ (ತ.ಪ). [4] ಪಂಶೇಷ (ತ).

ಶಕುನಿ ಮೋಹರಿಸಿದನು ಸಮಸ
ಪ್ತಕರು ಬೇಱೊಡ್ಡಿದರು ಕೃತವ
ರ್ಮಕ ಕೃಪಾಶ್ವತ್ಥಾಮರೊದಗಿದ[1]ರೊಂದು[1] ಬಾಹೆಯಲಿ |
ಸಕಲ ಬಲ ಮಾದ್ರೇಶ್ವರನ ಹೇ
ಳಿಕೆಯಲೊಯ್ಯಾರಿಸಿತು ಕುರುಬಲ
ನಿಕರ ತಳಿತುದು ತರವಿಡಿದು ಕಳನೊಂದು ಮೂಲೆಯಲಿ ॥ ೯

ಇದಿರಲೌಕಿತು ಗಾಳಿ [2]ಪ[2]ಟ್ಟದ
ಮದಗಜಾವಳಿ ಮುಗ್ಗಿದುವು ಧ್ವಜ
ವದಿರಿದವು ಹೊಡೆಗೆಡೆದು ಹೊಳೆದುದು ತೇರು [3]ಪಳ[3]ವತಿಯ |
ಬಿದಿರಿದವು [4]ತ[4]ಡಿಸಹಿತ ಘಟ್ಟಿನ
ಕುದುರೆ ಮೈಗಳಲಾಯುಧದ ಕಿಡಿ
ಯುದುರಿದವು ಕುರುಬಲದಲದ್ಭುತವಾಯ್ತು ನಿಮಿಷದಲಿ ॥ ೧೦

ಬಂದುದಾ ಮೋಹರ ಬಲೌಘದ
ಮುಂದೆ ಪಾಠಕರವರ ಕಾಹಿ[5]ಗೆ[5]
ಹಿಂದೆ ಬಿಲ್ಲಾಳವರ ಸುಯ್ದಾನದಲಿ ಸಬಳಿಗರು |
ಹಿಂದೆ ತುರಗ ಸಮೂಹವಲ್ಲಿಂ
ಹಿಂದೆ ಗಜಘಟೆ ಗಜದ ಬಳಿಯಲಿ
ಸಂದಣಿಸಿದುದು ರಾಯದಳ ಮಣಿರಥನಿಕಾಯದಲಿ ॥ ೧೧

ಅರಸನೆಡವಂಕದಲಿ ಸಾತ್ಯಕಿ
ನರ ನಕುಲ ಸಹದೇವ ಸೋಮಕ
ವರ ಯುಧಾಮನ್ಯೂತ್ತಮೌಜಸ ಸೃಂಜಯಾದಿಗಳು |
ನೆರೆದುದಾ ಬಲವಂಕದಲಿ ತನು
ಜರು ವೃಕೋದರ ದ್ರುಪದಸುತ ದು
ರ್ಧರ ಶಿಖಂಡಿ ಪ್ರಮುಖ ಘನಪಾಂಚಾಲ [6]ಪರಿವಾರ[6] ॥ ೧೨

ಆಯತಿಕೆಯಲಿ ಬಂದು ಪಾಂಡವ
ರಾಯದಳ ಮೋಹರಿಸಿ ನಿಂದುದು
ರಾಯರಿಬ್ಬರ ಬೀಸುಗೈಗಳ ಸನ್ನೆ ಸಮವಾಗೆ |

---

[1] ರೆರಡು (ಖ.ತ). [2] ವ (ತ.ಘ). [3] ತುರು (ತ). [4] ದ (ಖ.ದ). [5] ವ (ಕ.ಗ.ಖ). [6] ನಾಯಕರು (ಕ).

ತಾಯಿಮಳಲನು ತಱುಬಿದಬುಧಿಯ
ದಾಯಿಗರು ತಾವಿವರೆನಲು ಬಿಡೆ
ನೋಯುಬೆರಸಿದುದುಭಯಬಲ ಬಲುಖತಿಯ ಬಿಂಕದಲಿ ‖ ೧೩

ಕೇಣವಿಲ್ಲದೆ ಭಟರ ಹಾಣಾ
ಹಾಣಿ ಮಸಗಿತು ಖಣಿಖಟಿಲ ಹೊ
ಯ್ದಾಣೆಗಳ ಬಿಱುಗಿಡಿಯ ಹಿರಿಯಬ್ಬಣದ ಹೊಯ್ಲುಗಳ ।
ಹೂಣಿಕೆಯ ಸಬಳಿಗರೊಳಿಮ್ಮೈ
ಗಾಣಿಕೆಯ [1] ಬಲುಸೂತರಥಿಕರ
ಜಾಣತಿಯ ಬಿಲ್ಲವರ[1] ಧಾಳಾಧೂಳಿ ಬಲುಹಾಯ್ತು ‖* ೧೪

ರಾವುತರು ಸೆಲ್ಲಿಸಿದರಗ್ಗದ
ಮಾವುತರನಾನೆಗ[2]ಳ[2] ತುಡುಕಿ ಹ
ಯಾವಳಿಯ ಬೀಸಿದರು ರಥಿಕರು ಹಾಯ್ಸಿದರು ರಥವ ।
ಆ ವರೂಥವನೇಳನೆಂಟು ಗ
ಜಾವಳಿಗಳಟ್ಟವು ಗಜಸ್ಕಂ
ಧಾವಲಂಬವ ಸೆಕ್ಕಿದರು ಸುರಗಿಯಲಿ [3]ಸಮರಥರು[3] ‖ ೧೫

ಒಱಲೆ ಗಜ ದಾಡೆಗಳ ಕೈಗಳ
ಹಱಿಯಹೊಯ್ದರು [4]ಪಾರ[4]ಕರು ಮು
ಕ್ಕುಱಿಕಿದರೆ ಸಬಳಿಗರು [5]ಕೋದೆತ್ತಿದರು[5] ಕರಿಘಟೆಯ ।
ತಱುಬಿದರೆ ಕಡಿನಾಲ್ಕ ತೋಱಿಸಿ
ಮೆಱೆದರುಱೆ ರಾವುತರು ರಾವ್ತರ
ತಱುಬಿದರು ತನಿಚೂಣಿ ಮಸಗಿತು ತಾಱುಥಟ್ಟಿನಲಿ ‖ ೧೬

ಅರಸ ಕೇಳೈ ಹೊಕ್ಕ ಚೂಣಿಯ
ನೆರಡು ಬಲದಲಿ ಕಾಣೆನಗ್ಗದ
ದೊರೆಗಳನುವಾಯ್ತಾಚೆಯಲಿ ಧರ್ಮಜನ ನೇಮದಲಿ ।
ಗುರುಜ ಕೃಪ ಕೃತವರ್ಮ ಯಮುನೇ
ಶ್ವರ ಸುಶರ್ಮ ಸುಬಾಹು ಶಕುನಿಗ
ಳುರವಣಿಸಿತೀಚೆಯಲಿ ಶಲ್ಯನ ಬೆರಳ ಸನ್ನೆಯಲಿ ‖ ೧೭

---

* ಈ ಪದ್ಯ (ಙ.ದ) ಪ್ರತಿಗಳಲ್ಲಿಲ್ಲ. [1] ಬಹುಬಹುಸುತರ ಬಾಣದಬಾಣತಿಯು (ಞ). [2] ಳು (ಕ). [3] ಸಬಳಿಗರು (ಚ.ದ). [4] ಪಾರ (ಕ), ಪಾದ (ಗ), ಪಾಠ (ಘ.ದ). [5] ತಿವಿದರು ಬೆರಸಿ (ಕ), ಕೊಯ್ದೊತ್ತಿದರು (ಗ.ಫ), ಕೊರೆದೆತ್ತಿದರು (ಙ.ದ), ತಿವಿದೆತ್ತಿದರು (ಪ).

ನಿಲಿಸಿದರು ನಿನ್ನವರು ಬಲದ
ಗ್ಗಳಿಯರನು ಬಿರುದಾವಳಿಯ ಮೂ
ದಲಿಸಿದರು [1]ವಿಮಲಾನ್ವಯಾಗತ ವಿಕ್ರಮೋನ್ನ[ತರ][1] ।
ಬಲನೆಡನ [2]ಮಡಿ[2]ವೆರಳ ಮುಡಿಮುಂ
ದಲೆಯ ಲಘುವಾಗದಿರಿ ಶಸ್ತ್ರಾ
ವಳಿಯ ಬಾಯ್ದುತ್ತುಗಳ ಸೆಳೆಯದಿರೆಂದರುಬ್ಬಿನಲಿ ॥ ೧೮

ದೊರೆಯೊಳೊಬ್ಬನ ಹಾನಿ ಭಟರೆ
ಲ್ಲರಿಗೆ ದೊರೆ ದೊರೆ [3]ತತ್ತರುಳಿದರು[3]
[4]ನೆರವು ಬಹುದೋರಂದವೊಮ್ಮುಖವೊಂದು ಸಂಕೇತ[4] ।
ಉರವಣಿಸದಿರಿ ಕಂಡ ಮುಖವಲಿ
ಕರಿ ತುರಗ ರಥ ಪತ್ತಿ ರಣಕು
ಬ್ಬರಿಸದಿರಿ ಕೃತಸಮಯವೆಂದರು ಸಾರಿ ಸುಭಟರಿಗೆ ॥ ೧೯

ನೂಕಿದರು ನಿನ್ನವರು ಹಿನ್ನೆಲೆ
ಯಾಕೆವಾಳರ ಜೋಕೆಯಲಿ ರಣ
ವೋಕರಿಸಿತರುಣಾಂಬುವನು ಗಜಹಯದ ವ್ರಣಗಳಲಿ ।
ವ್ಯಾಕುಲರ ಬಯ್ಬಯ್ದು ಚಪಲಾ
ನೀಕ [5]ಬಂಡಿಸಿ[5] ಚಂಡಪಾತ [6]ನಿ
ರಾಕರಿಷ್ಣುಗಳೊಕ್ಕಲಿಕ್ಕಿತು[6] ದಳದ ಮಧ್ಯದಲಿ (?) ॥ * ೨೦

ಕವಿದುದೊಂದೇ ಸೂಱಿಯಲಿ ರಿಪು
ನಿವಹ ನಿಬ್ಬರದಬ್ಬರದ ಶರ
ಲವಣಿ[7]ಗಳ[7] ಲಾವಣಿಗೆಗಳ [8]ಲಂಬನದ ಲಂಘನದ[8] ।
ಪವನಜನ ಪಡಿಬಲದಲೌಕಿದ
ನವನಿಪತಿ ಸಹದೇವ ನಕುಲರ
ನವಡಿರಥ ಸಮ್ಮುಖಕೆ ಬಿಟ್ಟ[9]ವು[9] ಮಾದ್ರಭೂಪತಿಯ ॥ ೨೧

---

[1] ವೀರಾನ್ವಯಾಗತ ವಿಕ್ರಮೋಚಿತವ (ಕ), ವಿಮಲಾನ್ವಯಾಗತವಿಕ್ರಮೋನ್ನತಿಯ (ಖ), ವಿಮಲಾನ್ವಯಾಗತವಿಕ್ರಮಾನಲನ (ಘ), ವಿಮಲಾನ್ವಯಾಗತ ವಿಕ್ರಮಾಗತರ (ಟ.ದ), ವೀರಾಜಯಾಗತ ವಿಕ್ರಮಾಗತರ (ತ), ವಿಮಲಾನ್ವಯಂಗಳ ವಿಕ್ರಮಾನ್ವಿತರ (ಪ). [2] ಕಡಿ (ಘ), ಮಡ (ಟ). [3] ತತ್ತುಳಿದುದು (ಘ), ತತ್ತುದುಳಿದರು (ತ). [4] ಮೊರೆವ ಬಹುವಿಧವಾದ್ಯರವದೊಡನೊಂದೆ ಸಂಭೇದ (ಟ.ದ). * ಈ ಪದ್ಯ (ಟ.ದ) ಪ್ರತಿಗಳಲ್ಲಿಲ್ಲ. [5] ಚಂಡಿಸಿ (ಕ), ತಳಿತುದು (ಗ.ಘ). [6] ನಿವಾಕರಿಷ್ಣುಗಳೊಕ್ಕಲಿಕ್ಕಿತು (ಅಚ್ಚಿನಪ್ರತಿ), ನಿವಾಕರಿಪುಗಳೊಳೊಕ್ಕಲಿಕ್ಕಿತು (ಘ.ತ). [7] ಗೆಯ (ತ). [8] ಯಡಬಲದ ಲಂಘನೆಯ (ಘ). [9] ನು (ತ).

ಆರಿವರು ಸಹದೇವ ನಕುಲ [1]ರೆ[1]
ಭಾರಿಯಾಳುಗಳಹಿರಲೇ ಬಿಲು
ಗಾಱರಲ್ಲಾ ಕಳಶ[2]ಸಿಂಧನ[2] ಕೋಲ ಮಕ್ಕಳಲೇ ।
ಸೈರಿಸಿದರೊಪ್ಪುವುದಲೇ ಜು
ಜ್ಝಾರತನಕಾಭರಣವಹುದೆನು
ತಾರುಭಟೆಯಲಿ ಶಲ್ಯ ಹಳಚಿದನರ್ಜುನಾನುಜರ ॥ ೨೨

ಪಡಿತಳಿಸಿ ಸಹದೇವ ನಕುಲರ
ನಡೆಗಲಸಿತರ್ಜುನನ ರಥ ನರ
ನೊಡನೆ ಹೊಕ್ಕನು ಭೀಮನುರು ಪಾಂಚಾಲಬಲ ಸಹಿತ ।
ಜಡಿವ ನಿಸ್ಸಾಳದಲಿ ಜಗ ಕಿವಿ
ಗೆಡೆ ಯುಧಿಷ್ಠಿರರಾಯನೌಕಿದ
ನೆಡಬಲನ ಕೊಂಡರು ಯುಯುತ್ಸು ಶಿಖಂಡಿ ಸೃಂಜಯರು ॥ ೨೩

ಏಱಿತೊಬ್ಬನ ಮೇಲೆ ರಿಪುರಥ
ವಾಱು ಸಾವಿರ ಮತ್ತಗಜಘಟೆ
ಮೂಱು ಸಾವಿರ ಹತ್ತು ಸಾವಿರ ತುರುಗದಳ ಸಹಿತ ।
ತೂಱುವಂಬಿನ ತುಂಡಿಸುವ [3]ಬಿ
ಟ್ಟೇ[3]ಱುಗಳ ಚೂರಿಸುವ ಸಬಳದ
[4]ಗೇ[4]ಱುಗಳ ಕಾಲಾಳು ಕವಿದುದು ಶಲ್ಯನಳವಿಯಲಿ ॥* ೨೪

ದಳಪತಿಯ ಮುಕ್ಕುಱುಕಿದರು ಪಡಿ
ಬಲವ ಬರಹೇಳೆನುತ ಚಾಚಿದ
ಹಿಳುಕುಗೆನ್ನೆಯ ಹೊಗರುವೋಱೆಯ ಬಿಗಿದ ಹುಬ್ಬುಗಳ ।
ಕಳಶಜನ ಸುತನೌಕಿದನು ಕೃಪ
ನಳವಿಗೊಟ್ಟನು ಸುಬಲಸುತನಿ
ಟ್ಟಳಿಸಿದನು [5]ಕರ್ಣಾತ್ಮಜರು[5] ಕೈಕೊಂಡರೊಗ್ಗಿನಲಿ ॥ ೨೫

ನೆತ್ತಿಯಗತೆಗಳಂಕುಶದ ಬೆರ
ಳೊತ್ತುಗಿವಿಗಳ ಕರದ ಪರಿಘದ
ಮತ್ತಗಜಘಟೆಗಳನು ನೂಕಿದರೆಂಟು ಸಾವಿರವ ।

---

[1] ರು (ಕ). [2] ಸಂಧವ (ಖ). [3] ಬೀಱೀ (ಟ.ದ). [4] ಗಾ (ತ).
* (ತ) ಪ್ರತಿಯಲ್ಲಿ ೨೪—೨೫ನೆಯ ಪದ್ಯಗಳ ಕ್ರಮವು ಹಿಂದುಮುಂದಾಗಿದೆ.
[5] ಸಮಸಪ್ತಕರು (ಕ), ಶಲ್ಯಾನುಜರು (ಫ), ಕದನಾತುರರು (ಪ).

ಸುತ್ತು[1]ಝುಲ್ಲಿಯ[1] ಝುಲ್ಲರಿಯ ಬಲು
ಹತ್ತುಗೆಯ [2]ಬಿಱುಬು[2] ಗಳ ತೇರಿನ
ಹತ್ತುಸಾವಿರ ಹೊದಱುದೆಗೆದವು ಶಲ್ಯನೆಡಬಲಕೆ ॥* ೨೬

ಮೂಱು ಕೋಟಿ ಪದಾತಿಯಲಿ ದೊರೆ
ಯೇಱಿದನಲ್ಲಿ ನಿನ್ನ ಮಗನು
ಬ್ಬೇಱಿ ರಾವ್ತರು ಹೊಕ್ಕರೆರಡೇ ಲಕ್ಕ ತೇಜಿಯಲಿ ।
ಕೀಱಿದರು ಮೊಱೆಯೊಡ್ಡನಿವರವ
ರೇಱಿ ಹೊಯ್ದರು ನಿನ್ನವರನೊಗು
ವೇಱಿ ಬಾಯ್ಗಳ ರುಧಿರಜಲವದ್ದುದು ಚತುರ್ಬಲವ ॥ ೨೭

[3]ತಪ್ಪಿಸಿದ[3] ಮೈಮೈಗಳಲಿ ಹರಿ
ತಪ್ಪ ರಕ್ತವ ಸುಱಿದು ಕೆಂಧೂ
ಳುಪ್ಪರಿಸಿದುದು ಚಟುಳ ಚಾತುರ್ಬಲದ ಪದಹತಿಗೆ ।
ಅಪ್ಪಿದಾದು ಕೆಂಧೂಳಿನೊ[4]ಡ್ಡಿ[4]ನ
ದರ್ಪಣದ ತನಿರಕ್ತವೆರಡಱ
ದರ್ಪವಡ[5]ಗದು[5] ನಿಮಿಷದಲಿ ನರನಾಥ ಕೇಳೆಂದ ॥ ೨೮

ತೆಗೆದರರ್ಜುನನನು ಸುಶರ್ಮನ
ವಿಗಡ ರಥಿಕರು ಭೀಮಸೇನನ
ನುಗಿದನಿತ್ತಲು ನಿನ್ನ ಮಗನಾ ಸಾತ್ಯಕಿಯ ರಥವ ।
ಹೊಗರುಗಣೆಯಲಿ ಮುಸುಕಿದನು ಹೊ
ಣಗನಲೀ ಗುರುಸೂನು ನಕುಲನ
ತೆಗೆಸಿದನು ತೂಱಂಬಿನಲಿ ತೆರಳದೆ ಕೃಪಾಚಾರ್ಯ ॥ ೨೯

ಹಳಚಿದನು ದಳಪತಿಯುನವನಿಪ
ತಿಲಕನೆಚ್ಚನು ನೂಱು ಶರದಲಿ
ಕಳಚಿ ಕಯ್ಯೊಡನೆಚ್ಚು ಬೇಗಡೆಗಳೆದನವನಿಪನ ।
ಅಳುಕಲಱಿವುದೆ ಸಿಡಿಲ ಹೊಯ್ಲಲಿ
ಕುಲಕುಧರವೀ ಧರ್ಮಸುತನ
ಗ್ಗಳಿಕೆಗುಪ್ಪಾರತಿಗಳಾದುವು ಶಲ್ಯನಂಬುಗಳು ॥ ೩೦

---

[1] ಬಳಸುವ (ತ), ಚವುರಿಯ (ಫ). [2] ಸಿವುರು (ಫ). * ಈ ಪದ್ಯ (ಚ.ದ) ಪ್ರತಿಗಳಲ್ಲಿಲ್ಲ. [3] ತುಪ್ಪಳಿಸಿ (ಫ). [4] ಪ್ಪಿ (ಕ.ತ). [5] ಗಿತು (ಕ).

ಅರಸ ಕೇಳ್ಕೈ ಮುಳಿದ ಮಾದ್ರೇ
ಶ್ವರನ ಖತಿಯೋ ಕುಪಿತ ಯಮನು
ಬ್ಬರದ ಕೋಪವೊ ಕಾಲರುದ್ರನ ಹಣೆಯ ಹೆಗ್ಗಡಿಯೊ ।
ಉರಿದನಗ್ಗದ ರೋಷದಲಿ ಹೊಗೆ
ಹೊರಳಿಗಟ್ಟಿತು ಸುಯ್ಲಿನಲಿ ಸಂ
ವರಿಸಿಕೊಳು ಕೌಂತೇಯ ಎನುತೆಚ್ಚನು ಮಹೀಪತಿಯ ॥ ೩೧

ಮುಂದಣಂಬಿನ ಮೊನೆಯನೊದೆದವು
ಹಿಂದಣಂಬುಗಳವರ ಮೊನೆಗಳ
ಹಿಂದಣಂಬಿನ ಹಿಳುಕು ಹೊಕ್ಕವು [1]ಮುಂಚಿದಂ[1]ಬುಗಳ ।
ಹಿಂದಣವು ಹಿಂದಿಕ್ಕಿದವು ಮಿಗೆ
ಹಿಂದಣಂಬುಗಳೆಂಜಲಿಸಿ ಬಳಿ
ಸಂದವುಳಿದಂಬುಗಳೆನಲು ಕವಿದೆಚ್ಚನವನಿಪನ ॥ ೩೨

ತೋಡಿ ನೆಟ್ಟವು ಸೀಸಕವನೊಡೆ
ದೋಡಿದವು ಕವಚದಲಿ ಕುದುರೆಯ
ಜೋಡು ಹಕ್ಕರಿಕೆಯಲಿ ತಳತವು ಹಿಳುಕು ಹರಹಿನಲಿ ।
ಕೂಡೆ ರಥದಲಿ ಸಿಂಧದಲಿ ಮೈ
ಗೂಡಿ ಗಾಲಿಗಳಲಿ ವರೂಥದ
ಲೀಡಿಱಿದವಂಬುಗಳು ಕಲಿಮಾದ್ರೇಶನೆಸುಗೆಯಲಿ ॥ ೩೩

ದೊರೆಗೆ ಬಲುಹೋ ಸಮರ ಶಲ್ಯನ
ಶರವಳೆಗೆ ಹಿಡಿ ಕೊಡೆಯುವೆನಲ
ಬ್ಬರದೊಳಗೆ ಗಬ್ಬರಿಸೆ ನೆಲ ಗಾಲಿಗಳ ಘಲ್ಲಣೆಗೆ ।
ಸರಳ ಹೊದೆಗಳ ತುಂಬಿ ರಥ ಸಾ
ವಿರ[2]ದಲಾ[2] ಪಾಂಚಾಲಬಲವು
ಪ್ಪರಗುಡಿಯ ಸಿಂಧದ ಸಘಾಡದಲೈದಿತರಿಭಟನ ॥ ೩೪

ಪೂತುರೇ ಪಾಂಚಾಲ ಬಲ ಬಂ
ದಾತುಕೊಂಡುದೆ ಧರ್ಮಪುತ್ರನ
ಘಾತಿಯನು ಘಟ್ಟಿಸಿದರೇ ತು[3]ಷ್ಟಿ[3]ಸಿದನೇ ನೃಪತಿ ।
ಈತಗಳ ಕೊಳ್ಳೆನುತ ಶರಸಂ
ಘಾತವನು ಕವಿಸಿದನು ಮಾದ್ರೀ
ಜಾತರಡಹಾಯಿದರು ಶಲ್ಯನ ರಥದ ಸಮ್ಮುಖಕೆ ॥ ೩೫

---

[1] ಮುಂದಣಂ (ಖ.ತ) [2] ಸಹಿತ (ಖ.ಘ.ತ). [3] ಟ್ಟಿ (ಕ).

ಮಕ್ಕಳಿರ ನಿಮಗೇಕೆ ರಣವಿದು
ಮಕ್ಕಳಾಟಿಕೆಯಾಯ್ತಲಾ ಹಿಂ
ದಿಕ್ಕಿರಲಾ ಹೋರಿಯ ಧೂಳಿಯು ಬೆನ್ನ ತಡೆವರಲಾ |
ಎಕ್ಕ[1]ಸರ[1]ದಲಿ [2]ನಿಮ್ಮ[2] ರಾಯನ
ನಿಕ್ಕಿ ಭೀಮಾರ್ಜುನರಿಗೌತಣ
ವಿಕ್ಕುವೆನು ಬರಹೇಳೆನುತ ತೂಳಿದನು ಮಾದ್ರೇಶ || ೩೬

ದಳಪತಿಯ ದುವ್ವಾಳಿ ಪಾಂಡವ
ಬಲವ ಕೆದಱಿತು ಕಲ್ಪಮೇಘದ
ಹೊಲಿಗೆ ಹಱಿದವೊಲಾಯ್ತು ಮಾದ್ರೇಶ್ವರನ ಶರಜಾಲ |
ಅಳುಕದಿರಿ ಬದ್ದರದ ಬಂಡಿಯ
ನಿಲಿಸಿ ಹರಿಗೆಯ ಪಾಠಕರು ಕೈ
ಕೊಳಲಿ ಮುಂದಣ ನೆಲನೆನೆನುತುಬ್ಬರಿಸಿತರಿಸೇನೆ || ೩೭

ಅರಸ ಕೇಳ್ಳೆ ಬಳಿಕ ಶಲ್ಯನ
ಶರಹತಿಗೆ [3]ಬಿ[3]ಚ್ಚಿದವು ಹೂಡಿದ
ಹರಿಗೆಯಿಬ್ಬಗಿಯಾದವಾ ಬದ್ದರದ ಬಂಡಿಗಳು |
ಸರಳುಗಳ ಬಳಿಸರಳು ಬೆಂಬಳಿ
ಸರಳ ಹಿಂಡಣ ಸರಳುಗಳ ಪಡಿ
ಸರಳ ಸಾರದ ಸೋನೆ ಸದೆದುದು ವೈರಿವಾಹಿನಿಯ || ೩೮

ಘಾಯವಡೆದನು ದ್ರುಪದಸುತ ಪೂ
ರಾಯದೇಱಿನಲೋಡಿದರು ಮಾ
ದ್ರೇಯರುಬ್ಬಟೆ ಮುಱಿದು ಬೆಬ್ಬಳಿವೋದನವನೀಶ |
ರಾಯದಳ ದೆಸೆಗೆಟ್ಟುದೊಗ್ಗಿನ
ನಾಯಕರು ನುಗ್ಗಾಯ್ತು ಯಾದವ
ರಾಯ ಕಂಡನು ರಥವನೆಡಹಾಯ್ಸಿದನು ಫಲುಗುಣನ || ೩೯

ಎಲೆಲೆ ಹನುಮನ ಹಳವಿಗೆಯ ರಥ
ಹೊಳೆಯುತದೆ ದಳಪತಿಗೆ ಕಾಳಿಗ
ಬಲುಹು ಬರ[4]ಹೇಳುವುದು ಗೌತಮ ಗುರುಸುತಾದಿಗಳ[4] |

---

[1] ತುಳ (ಖ.ಗ.ಘ.ಪ). [2] ನಿಂದು (ಕ). [3] ಬೆ (ಖ.ತ). [4] ಹೇಳ್ಳೀಗ ದಲಿ ಗೌತಮನ ಗುರುಸುತನ (ಕ).

ಬಲವ ಕರೆ ಸಮಸಪ್ತಕರನಿ
ಟ್ಟಳಿಸಿ ನೂಕಲಿ ಕರ್ಣಸುತ[1]ಸೆಂ[1]
ದುಳಿದು ಹೊಕ್ಕನು ನಿನ್ನ ಮಗನೈನೂಱು ರಥಸಹಿತ॥ ೪೦

ಉಳಿದು ಕೌರವ[2]ಸರ್ವ[2]ದಳ ಮುಂ
ಕೊಳಿಸಿ ನೂಕಿತು ಶಲ್ಯನನು ಪಡಿ
ತಳಿಸಿ ಹೊಕ್ಕುದು ಕರ್ಣಸುತ ಕೃಪ ಗುರುಸುತಾದಿಗಳು।
ಪ್ರಳಯದಿನದಲಿ ಪಂಟಿಸುವ ಸಿಡಿ
ಲಿಳಿದುದೆನೆ ಬಹುವಿಧದ ವಾದ್ಯದ
ಮೊಳಗುಗಳ [3]ತುದಿ ತುಡುಕಿತಾ[3] ಬ್ರಹ್ಮಾಂಡಮಂಟಪವ॥ ೪೧

ಧರಣಿಪತಿ ಕೇಳ್ ಭೀಮಸೇನನ
ಕರಿಘಟೆಗಳಿಟ್ಟಣಿಸಿದವು [4]ಮೋ
ಹರಿಸಿ[4]ದವು ಸಾತ್ಯಕಿಯ ರಥವಾ ದ್ರೌಪದೀಸುತರ।
ಬಿರುದ ಭಟರೌಕಿದರು ರಾಯನ
ಧುರದ ಧೀವಸಿಗಳು ನಿಹಾರದ
ಉರವಣಿಸಿದರು ಶಲ್ಯನಂಬಿನ ಮಳೆಯ ಮನ್ನಿಸದೆ॥ ೪೨

ತರಹರಿಸಿದುದು ಪಾರುದಳ ತಲೆ
ವರಿಗೆಯಲಿ ಮೊಗ[5]ದಡ್ಡ[5]ವರಿಗೆಯು
ಲರರೆ ರಾವುತೆನುತ್ತ ನೂಕಿತು ಬಿಟ್ಟ ಸೂಠಿಯಲಿ।
ತುರುಗದಳ ಮೊಗರಂಬದಲಿ ಮೊಗ
ವರಿಗೆಗಳಲಾರೋಹಕರು ಚ
ಪ್ಪರಿಸಿ ಚಾಚಿದರಾವೆಗಳನಾ ಶಲ್ಯನಿದಿರಿನಲಿ॥ ೪೩

ಚೂರಿಸುವ ಮೊಗಸೂನಿಗೆಯ ಕೊ
ಲ್ಲಾರಿಗಳ ಶರಬಂಡಿಗಳ ಹೊಂ
ದೇರು ಕವಿದುವು ಕೋಲಕೋಲಾಹಲದ ತೋಹಿನಲಿ।
ವೀರರುಬ್ಬಿನ ಬೊಬ್ಬೆಗಳ ಜು
ಜ್ಝಾರರೇಱಿತು ಸರಳದಾರಾ
ಸಾರದಲಿ ದಕ್ಕಡರು ಬಿಲ್ಲವ[6]ರಾಂತರರ[6]ಘಾತನ॥ ೪೪

---

[1] ಬೆಂ (ಪು.ತ). [2] ನರಸು (ಕ). [3] ಕುಡಿಮಿಡುಕಿತಾ (ತ). [4] ಮುಕ್ಕುಳಿಸಿ (ಪ). [5] ದರ್ಥ (ಪು.ತ.ಪ). [6] ಗಾಕಿದರು (ಕ).

ಕಡಿದು ಬಿಸುಟನು ತಲೆವರಿಗೆಗಳ
ಲಡಸಿದಾ ಪಯದಳವನೊಗ್ಗಿನ
[1]ತುಡುಕುಗುದುರೆಯ[1] ಖುರುವ ತಱಿದನು ನಗದ ನಾಟಕ[2]ದ[2]।
ಗಡಣದಾನೆಯ ಥಟ್ಟನುಪ್ಪರ
ಗುಡಿಯ ರಥವಾಜಿಗಳ ರುಧಿರದ
ಕಡಲೊಳದ್ದಿದನುದ್ದಿದನು ಮಾರ್ಬಲದ ಗರ್ವಿತರ॥ ೪೫

ಮುಱಿದುದೈ ಚತುರಂಗಬಲ ನಿ
ನ್ನಿಱಿತವಾವೆಡೆ ಧರ್ಮಸುತ ಕೈ
ಮಱೆದಲಾ ಕಲಿಭೀಮಪಾರ್ಥರ ಬಿಂಕ ಬೀತುದಲಾ।
ಮೆಱೆಯಿ ಮದವನು ಮಾವತನವದು
ಹೊಱಗಿರಲಿ ಸಹದೇವ ನಕುಲರ
ನಱಿಯಬಹುದಿನ್ನೆನುತ ಹೊಕ್ಕನು ಶಲ್ಯ ಪರಬಲವ॥ ೪೬

ಸುರನದೀಸುತನೆಸುಗೆ ದ್ರೋಣನ
ಶರಚಮತ್ಕೃತಿ ಕರ್ಣನಂಬಿನ
ಹರಹು ಹೇೞಿತು ದಳಪತಿಯ ಶರಸೋನೆ [3]ಸಾರವಲಾ[3]।
ದೊರೆಯ ಸುಯ್ಯಾನದಲಿ ಸಾತ್ಯಕಿ
ಯಿರಲಿ ದೃಷ್ಟದ್ಯುಮ್ನ ಭೀಮಾ
ದ್ಯ[4]ರ ನಿರೀಕ್ಷಿ[4]ಸಹೇಳೆನುತ ತಾಗಿದನು ಕಲಿಪಾರ್ಥ॥ ೪೭

ಅರಸ ಕೇಳೈ ಶಲ್ಯ ಪಾರ್ಥರ
ಶರ[5]ವಿ[5]ಧಾನವನವರ ಬಾಣೌ
ತ್ಕರವನವರಂಬುಗಳ ಬಹಳಾಡಂಬರಧ್ವನಿಯ।
ನಿರುಪಮಾಸ್ತ್ರಪ್ರೌಢಿಯನು [6]ದು
ರ್ಧರ[6]ಶಿಳೀಮುಖ ಸರ್ಗಬಂಧ
ಸ್ಫುರಣವನು ಹಿಂದೀಸು ದಿನ ಕಾಣೆನು ರಣಾಗ್ರದಲಿ॥ ೪೮

ಎಸುವನರ್ಜುನನರ್ಜುನಾಸ್ತ್ರವ
ಕುಸುರಿದಱಿವನು ಶಲ್ಯ ಶಲ್ಯನ
ವಿಶಿಖವನು ಮುಱಿವನು ಧನಂಜಯನಾ ಧನಂಜಯನ।

---

[1] ಕಡುಗುದುರೆಗಳ (ಕ). [2] ವ (ಕ.ಟ), ರ (ದ). [3] ನಿಮಿಷದಲಿ (ಕ).
[4] ರನು ಸ್ಮರಿ (ಕ). [5] ನಿ (ಘ.ತ). [6] ಬದ್ಧರ (ಘ.ಟ.ದ).

ಮಸಕವನು ಮಾದ್ರೇಶನುಱೆ ಝೊಂ
ಪಿಸುವನಾ ಮಾದ್ರೇಶನಂಬಿನ
ಹಸರವನು ಹರಿಗಡಿವನರ್ಜುನನನಗಣಿತಾಸ್ತ್ರದಲಿ॥ ೪೯

ಕಂಡನೀ ಶಲ್ಯಾರ್ಜುನರ ಕೋ
ದಂಡಸಾರಶ್ರುತಿರಹಸ್ಯದ
ದಂಡಿಯನು ಕುರುರಾಯ ಕೈವೀಸಿದನು ತನ್ನವರ।
ಗಂಡುಗಲಿಗಳೊ ವೀರಸಿರಿ[1]ಯುಳಿ
ಮಿಂ[1]ಡರೋ [2]ತನಿ[2]ನಗೆಯ ಬಿರುದಿನ
ಭಂಡರೋ ನೀವಾರೆನುತ ಮೂದಲಿಸಿದನು ಭಟರ॥ ೫೦

ದಳವ ಕರೆ ದಳಪತಿಗೆ ಕಾಳೆಗ
ಬಲುಹು ಪಾರ್ಥನ ಕೂಡೆ ಗುರುಸುತ
ನೆಳವಿಗೊಡಲಿ ಸುಶರ್ಮ ತಾಗಲಿ ಭೋಜ ಗೌತಮರ।
ನಿಲಲಿ ಸುಭಟರು ಜೋ[3]ಡ[3]ಯಲಿ ಪರ
ಬಲಕೆ ಜಾಱುವ ಜಯಸಿರಿಯ ಮುಂ
ದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ॥ ೫೧

ನೂಕಿದರು ಶಲ್ಯಂಗೆ ಪಡಿಬಲ
ದಾಕೆವಾಳರು ಗುರುಸುತಾದ್ಯರು
ತೋಕಿದರು ಶರಜಾಳವರ್ಜುನನನಂಬಿನಂಬುಧಿ[4]ಯ[4]।
ಬೀಕಲಿನ ಭಟರುಬ್ಬಿದರೆ ಸು
ವ್ಯಾಕುಲರು ತುಬ್ಬಿದರೆ ತಪ್ಪೇ
ನೀ ಕಳಂಬವ ಕಾಯ್ದುಕೊಳ್ಳೆನುತೆಚ್ಚನಾ ಪಾರ್ಥ॥ ೫೨

ಮುಱಿಯೆಸುತ ಮಾದ್ರೇಶ್ವರನ ಹೊ
ಕ್ಕುಱುಬಿದನು ಗುರುಸುತನ [5]ಸೂತನ[5]
ನಿಱಿದು ಸಮಸಪ್ತಕರ ಸೋಲಿಸಿ ಕೃಪನ[6]ನಡ[6]ಹಾಯ್ಸಿ।
ತಱುಬಿದನು ಕುರುಪತಿಯನರ್ಜುನ
ನೊಱಲಿಸಿದ[7]ನೀ[7]ಸೈನ್ಯಸುಭಟರ
ನೆಱವಣಿಗೆ ನಿಪ್ಪಸರದಲಿ ಮುಸುಕಿತು ಧನಂಜಯನ॥ ೫೩

---

[1] ಯುಳವಿಂ (ಕ.ಗ.ಟ), ಉಳಿಖಂ (ಖ), ಯಿಲವಿಂ (ಟ.ದ), ಯಲಮಿಂ (ಘ.ಪ). [2] ಸಲೆ (ಕ). [3] ಕೆ (ತ). [4] ಗೆ (ದ). [5] ಶಕುನಿಯ (ತ). [6] ನೊಡೆ (ಖ.ಟ.ತ). [7] ನರಿ (ಕ).

ಅರಸ ಕೇಳಿತ್ತಲು ಯುಧಿಷ್ಠಿರ
ನರಪತಿಯನಟಿಸಿದನು ಮಾದ್ರೇ
ಶ್ವರನು [1]ರಾವುಳಿಯ[1]ಹೊಗೆಯಲಿ ಮುಸುಕಿದನು ಧರ್ಮಜನ।
ಧರೆಗೆ ಕಾಮಿಸಿದ್ಯೆ ಸುಯೋಧನ
ನರಸಿಯಲ್ಲಾ ಧಾತ್ರಿ ನಿಮ್ಮೆ
ಲ್ಲರಿಗೆ ಹುದುನೆಲನಲ್ಲವೆಂದೆನುತೆಚ್ಚನಾ ಶಲ್ಯ॥ ೫೪

ಮಾವ ಮಾಯಾಡಂಬರದ ದು
ರ್ಭಾವವೇತಕೆ ಕೌರವನೊಳೆಮ
ಗೀ ವಸುಧೆ ಹುದುವಲ್ಲ ನೆಲನೇಕಾಧಿಪತ್ಯವಲೆ।
ನೀವು ಕೌರವಸರ್ವದಳದ ದು
ರಾವಹರಲೇ ಬಾಣಸೃಷ್ಟಿಕ್ರ
ತಾವಧಾನವ ತೋಱೆನುತ ನೃಪನೆಚ್ಚು ಬೊಬ್ಬಿಱಿದ॥ ೫೫

ಬಱಿಯ ಬೊಬ್ಬಾಟವೊ ಶರಾವಳಿ
ಯಿಱಿಗೆಲಸ[2]ವೇನುಂಟೊ ಧರಣಿಯ
ಲೆ[2]ಱಕ ನಿಮ್ಮೈವರಿಗೆ ಗಡ ದ್ರೌಪದಿಗೆ ಸಮವಾಗಿ।
ಹೊಱಗು ಗಡ ಕುರುರಾಯನೀಗಳೊ
ಮಱುದಿವಸವೋ ಸಿರಿಮುಡಿಗೆ ನೀ
ರೆಱೆವ ಪಟ್ಟವದೆಂದು ನಿಮಗೆನುತೆಚ್ಚನಾ ಶಲ್ಯ॥ ೫೬

ಕಡಿದು ಬಿಸುಟನು ಶಲ್ಯವಸ್ತ್ರವ
ನೆಡೆ[3]ಗೊ[3]ಡದೆ ಕೂರಂಬುಗಳನಳ
ವಡಿಸಿದನು ನೃಪ[4]ವರನ[4] ಶರಸಂತತಿಯ ಸಂತೈಸಿ।
ಒಡನೊಡನೆ ಕೈಮಾಡಿದನು ಕೈ
ಗಡಿ[5]ಯನಂ[5]ಬಿನ ಧಾರೆ ದಳ್ಳಿಸಿ
ಕಿಡಿಗೆದಱಿದವು ನೃಪನ ರಥ ಸಾರಥಿ ಹಯಾಳಿಯಲಿ॥ ೫೭

ಗೆಲಿದನೋ ಮಾದ್ರೇಶನವನಿಪ
ತಿಲಕನನು ಘುಡ ಧರ್ಮಸುತನೀ
ದಳಪತಿಯನದ್ದಿದನು ಪರಿಭವಮಯ ಸಮುದ್ರದಲಿ।

---

[1] ಸುತ್ತಿಯೊಳ್ (ತ). [2] ಕಿಱಿದುಂಟೊ ಧರಣಿಯೊಳ್ (ಘ). [3] ಬಿ (ಘ).
[4] ನವರ (ಘ.ತ.ದ). [5] ಗನಂ (ಕ), ಯಲಂ (ಟ.ಪ.ದ).

ಅಳುಕಿದೆನು ನೃಪನೀ ಬಲಾಧಿಪ
ನುಲುಕನಂಜಿದನೆಂಬ ಲಗ್ಗೆಯ
ಲಳಿ ಮಸಗಿ ಮೈದೋಱಿತಾಚೆಯ ಸೇನೆ ಸಂದಣಿಸಿ॥ ೫೮

ನೆಲ ಬಿರಿಯಲಳ್ಳಿಱಿವ ವಾದ್ಯದ
ಕಳಕಳದ ಕೊಲ್ಲಣಿಗೆಯಲಿ ಮುಂ
ಕೊಳಿಸಿದರು ಸಹದೇವ ಸಾತ್ಯಕಿ ನಕುಲ ಸೃಂಜಯರು।
ದಳದ ಪದಹತಿಧೂಳಿಯಲಿ ಕೆ
ತ್ತಲಿಸೆ ದೆಸೆ ಪಾಂಚಾಲಬಲವಿ
ಟ್ಟಳಿಸಿ ನೂಕಿತು ಧರ್ಮಪುತ್ರನ ರಣದ ಚೂಣಿಯಲಿ॥ ೫೯

ಸರ್ಬಲಗ್ಗೆಯಲರರೆ ಪಾಂಡವ
ಸರ್ಬದಳ ದಳಪತಿಯ ಝೊಂಪಿಸ
ಲೊಬ್ಬನೊದಗಿದಡೇನಹುದು ಕವಿ ನೂಕು ನೂಕೆನುತ।
ಬೊಬ್ಬಿಡಲು ಕುರುರಾಯ[1]ನೀ[1]ಬಲ
ದಬ್ಬರಣೆ ವಾರಿಜಭವಾಂಡವ
ಗಬ್ಬರಿಸೆ ಘಾಡಿಸಿತು ಶಲ್ಯನ ರಥದ ಬಳಸಿನಲಿ॥ ೬೦

ಸೆಳೆದು ಹೊಯ್ದಾಡಿದುದು ಚಾತು
ರ್ಬಲ ಛಡಾಳಿಸಿ ವಿವಿಧ ಶಸ್ತ್ರಾ
ವಳಿಯ ಧಾರಾಸಾರದಲಿ ಹೊನಲೆದ್ದುದರುಣಜಲ।
ಉಳಿದರಿಬ್ಬರು ದೊರೆಗಳೆನೆ ಮು
ಮ್ಮಳಿತವಾದುದು ಸೇನೆ ನೃಪತಿಯು
ಹಳಚಿದನು ಮಾದ್ರೇಶನಾವೆಡೆ ಧರ್ಮಸುತನೆನುತ॥ ೬೧

ಮತ್ತೆ ತಱುಬಿದನವನಿಪನನಿದು
ಜೊತ್ತಿನಾಹವವಲ್ಲಲೇ ವಿಗೆ
ಹೊತ್ತು ಹೊಱಿಗೆಯ [2]ನೆಱವಣಿಗೆ[2] ಸೇನಾಧಿಪತ್ಯವಲೆ।
ತೆತ್ತಿಸಿದನಂಬಿನಲಿ ಜೋಡಿನ
[3]ಹತ್ತರಿಕೆಯಲಿ[3] ಚಿಪ್ಪನೊಡೆದೊಳು
ನೆತ್ತರೋಕುಳಿಯಾಡಿದುವು ಮಾದ್ರೇಶನಂಬುಗಳು॥ ೬೨

[1] ನಿಜ (ಘ.ಟ.ತ.ದ). [2] ನಿಱುಗೆಯಿದು (ಕ). [3] ಹತ್ತಿಗೆಯ ಬಲ (ಘ.ಟ.ದ), ಹತ್ತಿಹರಿಗೆಯ (ತ).

ಏನ ಹೇಳುವೆನರಸ ಕುಂತೀ
ಸೂನುವೇ ಕಿರುಕುಳನೆ ಶಲ್ಯನ
ನೂನ ಶರಜಾಲದಲಿ ನೊಂದನು ಬಹಳ ಧೈರ್ಯದಲಿ ।
ಭಾನುವಿನ ತಮದೊದವಿದನುಸಂ
ಧಾನದಂತಿರೆಯಹಿತಭಟನ ಸ
ಘಾನತೆಯನೆತ್ತಿದವು ಕುತ್ತಿದವೆಂಬು ದಳಪತಿಯ ॥ ೬೩

ಎರಡನೆಯ ಸಂಧಿ ಮುಗಿದುದು

# ಮೂರನೆಯ ಸಂಧಿ

ಸೂಚನೆ॥ ಸವೆದುದಗ್ಗದ ಪಾಂಡುಸುತಕೌ
ರವ ಬಲಾಂಬುಧಿ ಧರ್ಮತನುಜನ
ನಾವಗಡಿಸಿ ಸಮರದಲಿ ಮುರಿದನು ಮದ್ರಭೂಪಾಲ॥

ಕೇಳು ಧೃತರಾಷ್ಟ್ರಾವನಿಪ ಭೂ
ಪಾಲ ಶಲ್ಯರ ಸಮರಕವರನು
ಕೂಲವಾದರಲೈ ಕೃಪಾದಿಗಳತ್ತಲಾಚೆಯಲಿ।
ಮೇಳವಿಸಿತರ್ಜುನ ನಕುಲ ಪಾಂ
ಚಾಲ [2]ಬಲಭೀಮಾದಿಗಳು ಪದ[2]
ಧೂಳಿಯಲಿ ಜಗ ಮುಳುಗೆ ಜೋಡಿಸಿ ಜಡಿದುದುಭಯಬಲ॥ ೧

ಕೆದಱಿದನು ಕಲಿಭೀಮ ಬಲವಂ
ಕದಲಿ ಸಾತ್ಯಕಿ ನಕುಲರೆಡವಂ
ಕದಲಿ ಚೂಣಿಗೆ ಚಿಮ್ಮಿದರು ಪಾಂಚಾಲನಾಯಕರು।
ಮದಮುಖರನಿಕ್ಕಿದನು ಬಾಣೌ
ಘದಲಿ ಫಲುಗುಣನೊಂದು ಕಡೆಯಲಿ
ಸದೆದು ಸವಱಿದರೊಂದು ಕಡೆಯಲಿ ದ್ರೌಪದೀಸುತರು॥ ೨

ಕ್ಷಿತಿಪ ಚಿತ್ತೈಸೀಚೆಯಲಿ ಗುರು
ಸುತ ಸುಶರ್ಮಕ [3]ಶಲ್ಯ[3] ನಿನ್ನಯ
ಸುತನು ಕೃತವರ್ಮನು ಕೃಪಾಚಾರ್ಯಾದಿಗಳು ಮಸಗಿ।
ಘೃತಸಮುದ್ರದ ಸೆಱಗ ಸೋಂಕಿದ
ಹುತವಹನ ಸೊಂಪಿನಲಿ ವೈರಿ
ಪ್ರತತಿಯನು ತಱುಬಿದರು ತಱಿದರು ಸ್ವರ್ಗಳ ಸ್ವಾರದಲಿ॥ ೩

ಕೆಣಕಿದಡೆ ಗುರುಸುತನನಡಹಾ
ಯ್ದಣೆದ್ದನಂಬಿನಲರ್ಜುನನ ಮಾ
ರ್ಗಣಮಹಾರಣ್ಯದಲಿ ನಡೆದುದು ಕಡಿತ ಗುರುಸುತನ।

[1] ಘೃತಸಿಂಧು (ಕ). [2] ಭೀಮಾದಿಗಳು ಪದಹತಿ (ಖ.ಗ). [3] ಸಾಲ್ವ (ಘ).

ರಣವಿಶಾರದರಹಿರಲೇ ನೀ
ವಣಕವೇತಕೆ ರಾಜಗುರುಗಳು
ಸೆಣಸುವರೆ ಸೈರಿಸಿರೆ ನೀವೆನುತೆಚ್ಚನಾ ಪಾರ್ಥ॥ ೪

ಮೊಗೆದವಶ್ವತ್ಥಾಮನೆಚ್ಚಂ
ಬುಗಳನರ್ಜುನನಂಬು ಪಾರ್ಥನ
ಬಿಗಿದವಾ ನಿಮಿಷದಲಿ ಭಾರದ್ವಾಜ ಶರಜಾಲ।
[1]ಒಡಗು[1]ಗಿಡಗಳ ಸೂಸುವುರಿಧಾ
ರೆಗಳ ಘೃತಲೇಪನದ [2]ಬಂಧ[2]ದ
ಹೊಗರುಗಣೆ ಹೂಳಿದುವು ಗುರುಸುತನಂಬಿನಂಬುಧಿಯ॥ ೫

ಅರಸು ಕೇಳಡಹಾಯ್ದು ಪಾರ್ಥನ
ವರ ರಥವ ಹಿಂದಿಕ್ಕಿ ಪವನಜ
ನುರವಣಿಸಿದನು ನಕುಲ ಸಾತ್ಯಕಿ ಸಹಿತ ಗುರುಸುತನ
ಸರಳ ಸರಿವೆಳೆಗಳ ಸಘಾಡದ
ಲರಿಭಟನು ನನೆದನು ಮಹೋಗ್ರದ
ಧುರವ ಕಂಡನು ನೃಪತಿ ಬಂದನು ಬಿಟ್ಟ ಸೂಠಿಯಲಿ॥ ೬

ರಾಯ ಹೊಕ್ಕನು ಭೀಮಸೇನನ
ದಾಯ ಬಲುಹೋ ಧರ್ಮಪುತ್ರನ
ದಾಯವಲ್ಲದು ನೂಕೆನುತ ಕೃತವರ್ಮಗೌತಮರು।
ಸಾಯಕದ ಮಳೆಗಱೆದು ಕೌರವ
ರಾಯನನು ಹಿಂದಿಕ್ಕಿ ವೇಢೆಯ
ವಾಯುಜನ ವಂಗಡವ ಮುಱಿದರು ತಱುದರರಿಬಲವ॥ ೭

ಪಡಿಬಲಕೆ ಹೊಕ್ಕುದು ತ್ರಿಗರ್ತರ
ಗಡಣ ಕೃಪಕೃತವರ್ಮರಿಗೆ ಸಂ
ಗಡಿ[3]ಗನ[3]ಶ್ವತ್ಥಾಮನೀ ಹೇರಾಳ ದಳಸಹಿತ।
ಕೊಡಹಿದರು ಪಾಂಡವಬಲವನವ
ಗಡಿಸಿದರು ಪವಮಾನಜನ[4]ನ
ಕ್ಕುಡಿಸಿ ಬೆಬ್ಬಳೆವೋಯ್ತು[4] ಭೀಮನ ಭಾರಣೆಯ [5]ಭಟರು[5]॥ ೮

---

[1] ತಗಡು (ಕ), ಹೊಗರು (ಘ.ದ), ಬಗಡು (ತ). [2] ಬಣ್ಣ (ಘ) [3] ಸಿತ (ಕ). [4] ನುಗ್ಗಡದ ಬೇಳುವೆಯಾಯ್ತು (ಘ.ಟ.ದ.ಪ), ನುಕ್ಕುಡಿಯ ಬೇಳುವೆಯಾಯ್ತು (ತ). [5] ಬವರ (ಘ.ಟ.ಪ).

ಘಡ ಎನುತ ಪಾಂಚಾಲಬಲ ಸಂ
ಗಡಿಸಿತನಿಲಜನೊಡನೆ ಸೃಂಜಯ
ರೆಡೆಯುಲಡಹಾಯಿದರು ಸುತಸೋಮಾದಿಗಳು ಸಹಿತ।
ಕಡೆವಿಡಿದು ಕಲಿಪಾರ್ಥನಂಬಿನ
ವಡಬನೆದ್ದುದು ಕುರುಬಲದ ಹೆ
ಗ್ಗಡಲು ಬಱಿತುದು ಹೇಳಲೇನದ ಭೂಪ ಕೇಳೆಂದ॥ ೯

ಆ ಸಮಯದಲಿ ಬಹಳ ಶೌರ್‍ಯಾ
ವೇಶದಲಿ ನಿನ್ನಾತ ನೂಕಿದ
ನಾ ಶಕುನಿಯೈವತ್ತು ಸಾವಿರ ತುರಗದಳ ಸಹಿತ।
ಕೇಸುರಿಯ ಕರ್ಬೊಗೆಯವೊಲು ನಿ
[1]ಟ್ಟಾಸಿನಾಯುಧದಾನೆಗಳು[1] ಕೈ
ವೀಸುವಲ್ಲಿಂ ಮುನ್ನ ಮೊಗೆದುವು ವೈರಿಮೋಹರವ॥ ೧೦

ಗಜದಳದ ಘಾ[2]ಡಿ[2]ಕೆಗೆ ವಾಜಿ
ವ್ರಜದ ವೇಢಗೆ ಭೀಮನೇ ಗಜ
ಬಜಿಸುವನೆ ಹೊಡೆಸೆಂಡನಾಡಿದನಹಿತ ಮೋಹರವ।
[3]ಗು[3]ಜಱು [4]ಗುಲ್ಮದ ಕುಂಜರಾಶ್ವ[4]
ವ್ರಜದ ಮೆಳೆಯೊಣಗಿದುದು ಪವಮಾ
ನಜಪರಾಕ್ರಮಶಿಖಿಯ ಝಳ ಝೊಂಪಿಸಿತು ನಿಮಿಷದಲಿ॥ ೧೧

ಅಳಿದುದೈನೂಱಾನೆ ಸಾವಿರ
ಬಲುಗುದುರೆ ರಥ ಮೂಱು ಸಾವಿರ
ನೆಲಕೆ ಕೈವರ್ತಿಸಿತು ಭೀಮನ ಹೊಯ್ಲ ಹೋರಟೆಗೆ।
ಬಿಲುಹರಿಗೆ ಸಬಳದ ಪದಾತಿಯ
ತಲೆಯ ತೊಡಸಿದನೆಂಟು ಲಕ್ಕವ
ನುಳಿದ ಬಲವೋಲೈಸುತಿರ್ದುದು ಘನ ಪಲಾಯನವ॥ ೧೨

ತಡೆದನಶ್ವತ್ಥಾಮ ಭೀಮನ
ಕಡುಹನಾ ಸಹದೇವ ನಕುಲರ
ನಡುಗಿಸಿದನುಡುಗಿಸಿದನಾಟೋಪವನು ಪವನಜನ।

---

[1] ಟ್ಟಾಸುರದಲಾನೆಗಳುನಿರೆ (ಘ.ದ). [2] ಟಿ (ಕ). [3] ಗ (ಖ.ಘ.ತ).
[4] ಗುಲ್ಮನಿಕುಂಜವೇಣು (ಖ.ತ), ಗುಲ್ಮಜನಿಕುಂಥರಾಶ್ವ (ಘ).

ಇಡಿದುದಂಬರವಂಬಿನಲಿ ಕೈ
ಗಡಿಯ[1]ನಂಬಿನ[1] ಲಕ್ಷ್ಯಭೇದವ
ನುಡಿಯಬಲ್ಲವನಾವ ಗುರುನಂದನನ ಸಮರದಲಿ ॥ ೧೩

ಪವನಜನನೆಂಟಂಬಿನಲಿ ಪಾಂ
ಡವಸುತರನೈವತ್ತಱಲಿ ಯಾ
ದವನನಿಪ್ಪತ್ತಂಬಿನಲಿ ಮಾದ್ರೀಕುಮಾರಕರ ।
ಕವಲುಗೋಲಿಪ್ಪತ್ತಱಲಿ ಮುಱಿ
ದವಗಡಿಸಿ ಪಾಂಚಾಲ ಸೃಂಜಯ
ನಿವಹವನು ಮೂಱಂಬಿನಲಿ ಕೆಡೆಯೆಚ್ಚು ಬೊಬ್ಬಿಱಿದ ॥ ೧೪

ಏನ ಹೇಳುವೆ ಗಜಘಟಾಪ್ರತಿ
ಮಾನದಲಿ [2]ಕೋದಂ[2]ಬುಗಳು ಹಿಂ
ಡಾನೆಗಳನೇಳೆಂಟನೊದೆದೋಡಿದವು ಪಂಚಕವ ।
ಭಾನುರಶ್ಮಿಗಳಂಧಕಾರದ
ಮಾನಗರ್ವವ ಮುಱಿವವೊಲು ಗುರು
ಸೂನುವಿನ ಶರ ಸವಱಿದವು ಕರಿಘಟೆಯ ಬಲುಮೆಳೆಯ ॥ ೧೫

ತಾಗಿದವು ಕಂದದಲಿ [3]ನಾಳಿಕೆ
ಗಾಗಿ[3] ಹೊಱವಂಟಶ್ವನಿಕರವ
ನೀಗಿದವು ಶರವೊಂದು ಸಾವಿರ ರಥಹಯಾವಳಿಯ ।
ಬೀಗಿದವು ಕಾಲಾಳ ಕಬಳಿಸಿ
ತೇಗಿದವು ಚತುರಂಗವನು ಏಸಿ
ಯೋಗಿಸಿದವಂತಕನ ಮನೆಗಂಬುಗಳು ಗುರುಸುತನ ॥ ೧೬

ಕಡಿವಡೆದುದಿನ್ನೂಱು ಗಜ ಧರೆ
ಗುಡಿದು ಬಿದ್ದುದು ತೇರು ಸಾವಿರ
ವಡಗುದಱಿಯಾಯ್ತಶ್ವಚಯ ಸಾವಿರದ ಮೂನೂಱು ।
ಕಡುಗಲಿಗಳಱುವತ್ತು ಸಾವಿರ
ವೊಡಲ[4]ನಿಕ್ಕಿ[4]ತು ಪಾಯದಳವು
ಗ್ಗಡದ ಹಾಸರ ಬಿಲ್ಲಹಾದುದು ವೈರಿಮುಖದರಿಗೆ ॥ ೧೭

[1] ಸೊಸುಗೆಯ (ಖ;ಗ.ಘ.ಚ.ಛ.ಪ). [2] ಕೊಡಂ(ಖ), ಕೋದಂ (ತ).
[3] ಪಟ್ಟಳಕಾಗಿ (ಕ), ತಾಳಿಕೆಗಾಗಿ (ಖ). [4] ನೊಕ್ಕಿ (ಕ).

ಮತ್ತೆ ಕವಿದುದು ಪಾಂಡುಬಲವಱು
ವತ್ತು ಸಾವಿರ ಕುದುರೆ ನೂಱು
ಪ್ಪತ್ತು ಗಜರಥ ನೂಱು ಮೀಱಿತು ಲಕ್ಕ ಪಾಯದಳ।
ಸತ್ತಿಗೆಯ ಸಾಲಿನಲಿ[1] ಧರಣಿಯ
ಕಿತ್ತು ಮುಗುಚುವ ವಾದ್ಯರಭಸದ
ಲೆತ್ತಿ ನೂಕಿತು ಗುರುತನೂಜನ ರಥದ ಸಮ್ಮುಖಕೆ॥ ೧೮

ಇತ್ತ ಹೇಳಿಕೆಯಾಯ್ತು ಹಯುವಿ
ಪ್ಪತ್ತು ಸಾವಿರ ದಂತಿಘಟೆಯೈ
ವತ್ತು ನಾನೂಱೇಳು ರಥ ಸಾವಿರದ ನಾನೂಱು।
ತೆತ್ತಿಗರು ಕಾಲಾಳು ಲಕ್ಕವು
ಹತ್ತಿತಲ್ಲಿಯ ವಾದ್ಯರವ ಕೀ
ಱಿತ್ತು ಕಮಲಭವಾಂಡ ವಿಪುಲ ಕಟಾಹಖರ್ಪರವ॥ ೧೯

ಉರವಣಿಸಿತಿದು ಗುರುಸುತನ ಹಿಂ
ದಿರಿಸಿ ಪರಬಲದಭಿಮುಖಕೆ ಮೋ
ಹರಿಸಿ ನಿಂದುದು ಕಂಡನಿತ್ತಲು ಶಲ್ಯನಾ ಬಲವ।
ದುರಕೆ ನಾವಿರೆ ಸೇನೆ[2]ಯುಪ[2]ಸಂ
ಹರಿಸ[3]ಬ[3]ಹುದೇ ದ್ರೋಣ ಭೀಷ್ಮಾ
ದ್ಯರಿಗೆ ನಗೆಗೆಡೆ ನಾವಹೆವೆ ತೆಗೆಯೆನುತ ನಡೆತಂದ॥ ೨೦

ದಳವ ತೆಗೆತೆಗೆ ತಾನಿರಲು ಕುರು
ಬಲಕೆ ಬೀಯುವೆ ಕೌರವೇಂದ್ರನ
ಕೆಲಬಲದ ಸುಯಿಧಾನದಲಿ ಕೃಪಗುರುಸುತಾದಿಗಳ।
ನಿಲಲಿ ಶಕುನಿಯ ತುರಗದಳ ಹಿ
ನ್ನೆಲೆಗೆ ಹೋಗಲಿ ರಾಯದಳವೆ
ಮ್ಮಳವ ನೋಡುತ್ತಿರಲಿಯೆಂದನು ಶಲ್ಯ ಕುರುಪತಿಗೆ॥ ೨೧

ಕೇಳು ಕೃಪ ಕೃತವರ್ಮ ಗುರುಸುತ
ಕೇಳು ಶಕುನಿ ಸುಶರ್ಮ [4]ಸಾಲ್ವನೃ
ಪಾಲ ರಾಯನ[4] ಮಂತ್ರಿ ಸಚಿವ ಪಸಾಯ್ತರಾದವರು।

---

[1] ಲುಗಳ (ಕ). [2] ಯನು (ಕ). [3] ಲ (ಕ). [4] ಕೇಳು ನೃಪಾಲ ರಾಯನ (ಕ), ಕರು ನೀವ್ ಕೇಳಿಕೈ ನೃಪ (ಖ,ಙ,ಪ).

ಕೇಳಿರೈ ಭೀಷ್ಮಾದಿ ಸುಭಟರ
ಕಾಳೆಗವ ಕಂಡಿರಿ ಮದೀಯ ಕ
ರಾಳ[1]ಕದನೋತ್ಸವವ[1] ನೋಡುವುದೆಂದನಾ ಶಲ್ಯ॥ ೨೨

ತರಿಸಿ ಕಾಂಚನಮಯ ರಥವ ಸಂ
ವರಿಸಿದನು ಟೆಕ್ಕೆಯವನೆತ್ತಿಸಿ
ಸರಳ ತುಂಬಿದ ಬಂಡಿಗಳ ಕೆಲಬಲಕೆ ಜೋಡಿಸಿದ।
ಬಿ[2]ರು[2]ದನೊದಱುವ ಪಾಠಕರ ಮೋ
ಹರಕೆ ಮಣಿಕಾಂಚನವ ಮೊಗೆದಿ
ತ್ತರರೆ ಕರೆಯೋ ಧರ್ಮಜನನೆಂದುಬ್ಬಿದನು ಶಲ್ಯ॥ ೨೩

ರಾಯ ನಿಲುವನೊ ಮೇಣು ಪಾರ್ಥನೊ
ವಾಯುಸುತನೋ ನಿಮ್ಮ ಮೂವರೊ
ಳಾಯುಧವ ಕೊಂಡಾರು ಹೊಕ್ಕ[3]ರು[3] ನಿಲುವೆನವರೊಡನೆ।
ನಾಯಕರು ಮಿಕ್ಕವರೊಡನೆ ಬಿಲು
ಸಾಯಕವ[4]ನೊಡ್ಡಿದಡೆ[4] ಕೌರವ
ರಾಯನಾಣೆಯೆನುತ್ತ ಮದವೇಱಿದನು ಕಲಿಶಲ್ಯ॥ ೨೪

ದೆರಳ ತುಟಿಗಳ ಬೊಬ್ಬೆ ಮಿಗಲ
ಬ್ಬರಿಸಿದವು ನಿಸ್ಸಾಳ[5]ತತಿ[5]ಜ
ರ್ಝರ ಮೃದಂಗದ ಪಣಹ ಪಟಹದ ಗೌಱುಗಹಳೆಗಳ।
ಉರು ರಭಸವಳ್ಳಱಿ[6]ಯೆ[6] ರಥಚೀ
ತ್ಕರಣಿ ರಥ ಹಯ ಹೇಷಿತದ ನಿ
ಷ್ಠುರ ನಿನಾದದಲೌಕಿ ಹೊಕ್ಕನು ಶಲ್ಯನಾಹವವ॥ ೨೫

ದಳಪತಿಯ ಸುಮ್ಮಾನಮುಖ ಬೆಳ
ಬೆಳಗುತದೆ ಗಂಗಾಕುಮಾರನ
ಕಳಶಜನ ರಾಧಾತನೂಜನ ರಂಗಭೂಮಿ[7]ಯಿದು[7]।
ಕಳನನಿದನಾಕ್ರಮಿಸುವಡೆ ವೆ
ಗ್ಗಳೆಯ ಮಾದ್ರಮಹೀಶನಲ್ಲದೆ
ಕೆಲರಿಗೇನಹುದೆನುತೆ ಕೊಂಡಾಡಿತ್ತು ಕುರುಸೇನೆ॥ ೨೬

---

[1] ಭೀಕರರಣವ (ಕ). [2] ರಿ (ಕ.ಖ.ದ). [3] ರೆ (ಖ.ಘ.ತ). [4] ತುಡುಕಿದರೆ (ಘ.ದ). [5] ಶತ (ಖ.ಘ.ದ). [6] ವ (ಕ.ಖ.ತ). [7] ಯಲ (ಖ.ಘ.ಪ).

ಪೂತು ಮಝುರೇ ಶಲ್ಯ ಹೊಕ್ಕನೆ
ಸೂತಜನ ಹರಿಬದಲಿ ವೀರ
ವ್ರಾತಗಣನೆಯೊಳೀತನೊಬ್ಬನೆ ಹಾ ಮಹಾದೇವ।
ಧಾತುವೊಳ್ಳಿತು ದಿಟ್ಟನೈ ನಿ
ರ್ಭೀತ[1]ಗರ್ವಿತ[1]ನಿವನೆನುತ ಭಟ
ರೀತನನು ಹೊಗಳಿದರು ಸಾತ್ಯಕಿ ಸೋಮಕಾದಿಗಳು॥ ೨೭

ತಡೆದು ನಿಂದನು ಪರಬಲವ ನಿ
ಮ್ಮೊಡೆಯನಾವೆಡೆ ಸೇನೆ ಕದನವ
ಕೊಡಲಿ ಕೊಂಬವನಲ್ಲ ಕೈದುವ ಸೆಳೆಯೆನುಳಿದರಿಗೆ।
ಪೊಡವಿ[2]ಗೊಡೆಯನು[2]ಕೌರವೇಶ್ವರ
ನೊಡನೆ [3]ಸಲ್ಲದು ಗಡ ಶರಾಸನ
ವಿಡಿಯ ಹೇಳಾ ಧರ್ಮಜನನೆಂದುಱುಬಿದನು ಶಲ್ಯ[3]॥ ೨೮

ಚೆಲ್ಲಿತದು ನಾನಾಮುಖಕೆ ನಿಂ
ದಲ್ಲಿ ನಿಲ್ಲದೆ ಸೃಂಜಯಾದ್ಯರ
ನಲ್ಲಿ ಕಾಣೆನು ಸೋಮಕರ ಪಾಂಚಾಲಮೋಹರವ।
ಕೆಲ್ಲೆಯಲಿ ಭೀಮಾರ್ಜುನರು ಬಲು
ಬಿಲ್ಲನೊದಱಿಸೆ ಕದನಚೌಪಟ
ಮಲ್ಲ ತಾನಿದಿರಾಗಿ ನಿಂದನು ಪಾಂಡವರ ರಾಯ॥ ೨೯

ಜೀಯ ಬುಧನ ಪುರೂರವನ ಸುತ
ವಾಯುವಿನ ನಹುಷನ ಯಯಾತಿಯ
ದಾಯಭಾಗದ ಭೋಗನಿಧಿಯವತರಿಸಿದೈ ಧರೆಗೆ।
ಜೀಯನೆನಿಸಿದೆ ಜೂಜಿನಲಿ ರಣ
ಜೀಯನಹನೀ ಕೌರವನು ನಿ
ನ್ನಾಯತಿಯ ಸಂಭಾವಿಸೆಂದುದು ವಂದಿ[4]ಜನಜಲಧಿ[4]॥ ೩೦

ಹರಿಗೆ ಹೊಡವೆಂಟಸ್ತ್ರ[5]ಶಿಕ್ಷಾ[5]
ಗುರುವ [6]ಮನದಲಿ ನೆನೆದು ಹೊಸ ಬಿಲು
ದಿರುವ[6] ನೇಱಿಸಿ ಮಿಡಿದು ನಿಜ ಸಾರಥಿಯ ಬೋಳೈಸಿ।

---

[1] ನಹನಹ (ಖ.ಫ.ತ). [2] ಯಲಿಹುದು (ಖ.ಫ.ಟ.ದ.ಪ). [3] ನೃಪನಲ್ಲದ ವಿಚಾರವ ನುಡಿವವನ ಬರಹೇಳೆನುತ್ತುಱುಬಿದನು ಪರಬಲವ (ಕ). [4] ಸಂದೋಹ (ಫ.ಪ). [5] ವಿದ್ಯದ (ಕ), ವಿದ್ಯಾ (ತ). [6] ನೆನೆದು ಶರಾಸನಕೆ ಹೊಸ ತಿರುವ (ಖ.ಗ.ಫ.ತ.ದ.ಪ).

[1]ವರ ರಥವ ನೂಕಿದನು ಪವನಜ[1]
ನರ ನಕುಲ ಸಹದೇವ ಸಾತ್ಯಕಿ
ಬರಲು ಬಲವೆಡವಂಕದಲಿ ನರನಾಥ[2]ನಿದಿರಾದ[2] ॥ ೩೧

ಮಾವನವರೇ ನಿಮ್ಮ ಹಿಂಸೆಗೆ
ನಾವು [3]ಕ[3]ಡುಗೆವು ಕ್ಷತ್ರಜಾತಿಯ
ಜೀವನ[4]ವಲೇ[4] ಕಷ್ಟವಿದು ಕಾರ್ಪಣ್ಯತರವಾಗಿ।
ನೀವು ಸೈರಿಸಬೇಕು ನಮ್ಮ ಶ
ರಾವಳಿಯನೆನುತವನಿಪತಿ ಬಾ
ಣಾವಳಿಯ ಕೆದಱಿದನು ಸೇನಾಪತಿಯ ಸಮ್ಮುಖಕೆ ॥ ೩೨

ನಿನಗೆ ಮಾತುಳರಾವು ಮಾಣಲಿ
ಮುನಿಯೆಮಗೆ ಮೊಱೆಯಲ್ಲ ದುಶ್ಶಾ
ಸನ ಜಯದ್ರಥರಲ್ಲಲಾ ಸಂಬಂಧಿಗಳು ನಿನಗೆ।
ಜನಪ ಧರ್ಮದ ಹಿಂಸೆ ಬಂದುದು
ನಿನಗೆ ಸಾಕದನಾಡಲೇತಕೆ
ಮನದ ಗರ್ವದ ಗಾಢ[5]ವೈಸೆ[5]ನುತೆಚ್ಚನಾ ಶಲ್ಯ ॥* ೩೩

ಅರಸ ಕೇಳ್ ಶಲ್ಯನ ಯುಧಿಷ್ಠಿರ
ಧರಣಿಪನ ಸಂಗ್ರಾಮವಂದಿನ
ಸುರನದೀನಂದನನ ದ್ರೋಣನ ಸೂತಸಂಭವನ।
ನರನ ಭೂರಿಶ್ರವನ ಭೀಮನ
ಕುರುಪತಿಯ ವೃಷಸೇನ ಸೌಭ
ದ್ರರ ಸಮಗ್ರಾಹವವ ಮಿಱಿಸಿತು ಹೇಳಲೇನೆಂದ ॥ ೩೪

ದಿಟ್ಟ[6]ನೈ[6] ಭೂಪತಿಗಳಲಿ ಜಗ
ಜಟ್ಟಿ[7]ಯೈ[7] ನಿನಗಸ್ತ್ರವಿದ್ಯವ
ಕೊಟ್ಟವನ ನಾ ಬಲ್ಲೆನದನಿನ್ನಾಡಿ ಫಲವೇನು।
ತೊಟ್ಟ ಜೋಹದ ವಾಸಿಯೆಂಬುದ
ಬಿಟ್ಟು ನಮಗೊಡ್ಡುವುದು ನಿನ್ನೊಡ
ವುಟ್ಟಿದರನಿಬ್ಬರನೆನುತ ತೆಗೆದೆಚ್ಚನಾ ಶಲ್ಯ ॥ ೩೫

---

[1] ಅರಸನಿದಿರಾದವು ವೃಕೋದರ (ಖ.ಘ.ತ.ದ.ಪ). [2] ಹೊರವಂಟ (ಪ). [3] ನ (ಖ.ಗ.ಘ.ತ). [4] ವಿಧಲೆ (ತ.ಗ) [5] ವೆಂತೆ (ಕ). ಲೇಸೆ (ಪ). * ಈ ಪದ್ಯ (ಖ) ಪ್ರತಿಯಲ್ಲಿಲ್ಲ. [6] ನಹೆ (ಖ.ಗ.ಘ.ಟ.ದ). [7] ಯಹೆ (ಖ.ಗ.ಘ.ಟ.ದ).

ಮಾವ ಭೀಮಾರ್ಜುನರ ಭಾರಣೆ
ಗಾವ ನಿಲುವನು ಸಾಕದಂತಿರ
ಲೀ ವಿಚಿತ್ರ ಕಳಂಬಖಂಡನ [1]ಪಂಡಿತತ್ವವನು[1]।
ನೀವು ತೋಱಿರೆ ಸಾಕು ಸಾಮ
ರ್ಥ್ಯಾವಲಂಬನವುಳ್ಳಡೀ ಶ
ಸ್ತ್ರಾವಳಿಯ ಸೈರಿಸಿಯೆನುತ ಯಮಸೂನು ತೆಗೆದೆಚ್ಚ॥ ೩೬

ಧರಣಿಪತಿಯಂಬುಗಳನೆಡೆಯಲಿ
ತಱಿದು ತುಳುಕಿದನಂಬಿನುಬ್ಬಿನ
ಗಱಿಯ ಗಾಳಿಯ ದಾಳಿ ಪೈಸರಿಸಿದುದು [2]ಪರ್ವತವ[2]।
ಮೊರೆವ ಕಣೆ ಮಾರ್ಗಣೆಗಳನು ಕ
ತ್ತರಿಸಿದವು ಬಳಿಯಂಬುಗಳು ಪಡಿ
ಸರಳ ತೂಳಿದಡೆಚ್ಚರೆಚ್ಚರು ಮೆಚ್ಚಲುಭಯಬಲ॥ ೩೭

ಸೈರಿಸಾದಡೆಯೆನುತ ಮುಳಿದು ಮ
ಹೀರಮಣ ಮದ್ರಾಧಿಪನನೆ
ಚ್ಚಾರಿದನು ಮುಗುಳೆಚ್ಚು ಪುನರಪಿಯೆಚ್ಚು ಮು[3]ಗು[3]ಳೆಸಲು।
ಕೂರಲಗು ಸೀಸಕವ ಕವಚವ
ಹೋೞುಗಳೆದವು ನೆತ್ತರಿನ ಬಾ
ಯ್ಧಾರೆಗಳ [4]ತೋಱಿದವು ದಳಪತಿಯಪರಭಾಗದಲಿ[4]॥ ೩೮

ಪ್ರಳಯಪವನನ ಹೊಯ್ಲಿನಲಿ ಕಳ
ವಳಿಸಿದಮರಾದ್ರಿಯವೊಲುದುರಿದ
ಬಿಲುನೆರಳ ಹೆಗಲೋರೆಗರುಳರೆಮುಚ್ಚುಗಣ್ಣುಗಳ।
ತಳಿತ ರಕ್ತಾಂಕುರದ ಬಳಕೆಗೆ
ಬಳಲದಿಂದ್ರಿಯ[5]ಕುಳದ[5] ಮೂರ್ಛಾ
ವಿಲಸಿತಾಂಗದ ಶಲ್ಯನಿದ್ದನು ರಥದ ಮಧ್ಯದಲಿ॥ ೩೯

ಅರಸ ಕೇಳೈ ಮಱವೆಗಾತ್ಮನ
ನೆರವ ಕೊಟ್ಟು ಮುಹೂರ್ತಮಾತ್ರಕೆ
ಮರಳಿಚಿದವೊಲು ಕಂದೆಱೆದು ನೋಡಿದನು ಕೆಲಬಲನ।

---

[1] ಖಂಡಿತಾಸ್ತ್ರವನು (ಕ). [2] ಪರಬಲವ (ಘ.ದ). [3] ರ (ಕ).
[4] ಮುಖದೋಱಿದವು ದಳಪತಿಯ ದೇಹದಲಿ (ಕ). [5] ಕರಣ (ಕ), ದಮಳ (ತ..

ಸರಳ ಕಿತ್ತೌಷಧಿಯ ಲೇಪವ
ನೊರಸಿದನು ತೊಳೆತೊಳೆದು ನೂತನ
ವರ ದುಕೂಲವನುಟ್ಟು ಕೊಂಡನು ನಗುತ ವೀಳೆಯವ॥ ೪೦

ತುಡುಕಿದನು ಬಿಲುಸರಳನಕಟಟವ
ಗಡಿಸಿದನಲಾ ಧರ್ಮಸುತನು
ಗ್ಗಡದಲೊಂದು ಮುಹೂರ್ತವಾಯಿತೆ ಹಗೆಗೆ ಸುಮ್ಮಾನ।
ತೊಡಕಿದೆಡೆಗೆ ಜಯಾಪಜಯ ಸಂ
ಗಡಿಸುವುವು ತಪ್ಪೇನು ಯಮಸುತ
ಹಿಡಿ ಧನುವನನುವಾಗೆನುತ ಮೂದಲಿಸಿದನು ಶಲ್ಯ॥ ೪೧

ನರನ ರಥವದೆ ಮಱೆಯಹೊಗು ಮುರ
ಹರನ ಮಱೆವೊಗು ಭೀಮಸೇನನ
ಕರಸಿ ನೂಕು ಶಿಖಂಡಿ ಸಾತ್ಯಕಿ ಸೃಂಜಯಾದಿಗಳ।
ಅರಸುಗುಱಿಗಳ ಹೊಯ್ದು ಗೆಲುವಿನ
ಗರುವನಾದಡೆ ನಿಲ್ಲೆನುತಲು
ಬ್ಬರಿಸಿ ಮಾದ್ರಾಧೀಶನೆಚ್ಚನು ಧರ್ಮನಂದನನ॥ ೪೨

ಏನ ಹೇಳುವೆ ಭಟನ [1]ಶರ[1]ಸಂ
ಧಾನವನು ಪುಂಖಾನುಪುಂಖವಿ
ಧಾನವನು [2]ಝೇಂಕಾರಶರಜಾಳ[2]ಪ್ರಸಾರಣವ।
ಆ ನಿರಂತರ ಸರಳ ಸಾರದ
ಸೋನೆ ಸದೆದುದು ಧರ್ಮ[3]ಸುತನ[3] ರ
ಣಾನುರಾಗವ ತೊಳೆದುದದ್ಭುತವಾಯ್ತು ನಿಮಿಷದಲಿ॥ ೪೩

ಸರಳ ಮುಱಿಯೆಸಲಾ ಸರಳ ಕ
ತ್ತರಿಸಿ ಹತ್ತಂಬಿನಲಿ ರಾಯನ
ಬರಿಯ ಕವಚವ ಹಱಿಯಲೆಚ್ಚನು ಮೂಱು ಬಾಣದಲಿ।
ಶಿರದ ಸೀಸಕವನು ನಿಘಾತದ
ಲೆರಡು ಶರದಲಿ ಮತ್ತೆ ಭೂಪತಿ
ಯುರವ[4]ನ[4]ಗುಳದನೆಂಟಱಿಲಿ ಮಗುಳೆಚ್ಚು ಬೊಬ್ಬಿಱಿದ॥ ೪೪

[1] ಲಘು ಗ.ತ.ಪ). [2] ಝುಂಪಾಳಶರ ಝುಂಫಾಳ (ತ). [3] ಜನಕ (ಕ). [4] ನು (ಕ), ನೆ (ತ).

ಗರುಡತುಂಡದ ಹತಿಗೆ ಫಣಿಯೆದೆ
ಬಿರಿವವೊಲು ಯಮಸುತನ ತನು ಜ
ರ್ಝರಿತವಾದುದು ಜರಿವ ಜೋಡಿನ ಜಿಗಿಯ ಶೋಣಿತದ।
*[1]ಮುರಿದ ಕಂ[1]ಗಳ ಮಲಗಿನಲಿ ಪೈ
ಸರದ ಗಾತ್ರದ* ಗಾಢವೇದನೆ
ಯುರವಣಿಸೆ ಸೊಂಪಡಗಿ ನಿಮಿಷ ಮಹೀಶ ಮೈಮರೆದ॥ ೪೫

ಬಿದ್ದನಾಚೆಯು ದೊರೆ ಸುಯೋಧನ
ಗೆದ್ದನಿನ್ನೇನೆನುತ ಸುಭಟರ
ನದ್ದಿತತಿಸುಮ್ಮಾನಸಾಗರ ನಿನ್ನ ಮೋಹರವ।
ಅದ್ದರೋ ಶೋಕಾಂಬುಧಿಯಲೊಡೆ
ಬಿದ್ದರೋ ಭೀಮಾರ್ಜುನರಿಗುಸು
ರಿದ್ದುದೋ ಬರಹೇಳೆನುತ ಬೊಬ್ಬಿರಿದನಾ ಶಲ್ಯ॥ ೪೬

ಗಜಬಜಿಸಿದುದು ವೈರಿಸುಭಟ
ವ್ರಜ ನಕುಲ ಸಹದೇವ ಸಾತ್ಯಕಿ
ವಿಜಯ ಧೃಷ್ಟದ್ಯುಮ್ನ ಭೀಮ ದ್ರೌಪದೀಸುತರು।
ವಿಜಿತನೋ ವಿಗತಾಸುವೋ ಧ
ರ್ಮಜನ ಹದನೇನೆನುತ ಚಿಂತಾ
ರಜನಿಯಲಿ ಕಂಗೆಟ್ಟುದಾ ಬಲವರಸ ಕೇಳೆಂದ॥ ೪೭

ಕ್ಷಣಕೆ ಮರಳೆಚ್ಚತ್ತನಸ್ತ್ರ
ವ್ರಣವ ತೊಳೆದರು ಘಾಯದಲಿ ಕೇ
ವಣಿಸಿದರು ದಿವ್ಯೌಷಧಿಯ ಗಂಧಾನುಲೇಪದಲಿ।
ರಣವಿಜಯ ನವ ವಸನ ಮಣಿಭೂ
ಷಣ ಪರಿಷ್ಕೃತನಾಗಿ ತಿರುವಿನ
ಗೊಣೆಯವನು ನೇವರಿಸಿದನು ಸಂತೈಸಿ [2]ನಂಹನವ[2]॥ ೪೮

ಮಱವೆ ಮಸುಳಿತೆ ಭೂಮಿಪತಿ ಕಂ
ಡೆಱೆದಿರೇ ಭೀಮಾರ್ಜುನರು ನಿ
ಮ್ಮಿಱಿತಕೊದಗಿದರಿಲ್ಲಲಾ ನೀವೇಕೆ ರಣವೇಕೆ।

*—* ಮುರಿದ ಕೊರಳಿನ ಮುಗಿದ ಕಂಗಳ ಸರಳಘಾತದ (ಕ). [1] ಅರ ಳ್ವಗಂ (ಟ.ದ), ಮರಳ್ವಗಂ (ಘ.ದ). [2] ಸಾಹಸವ (ಕ.ಖ), ಸಾರಥಿಯ (ಇ.ದ).

ನೆಱೆ ಧನುರ್ವೇದಾರ್ಥಸಾರವ
ನಱಿವೆಯಾದರೆ ಕೊಳ್ಳೆನುತ ಬಿಡೆ
ತಱಿದನೆಂಟಂಬಿನಲಿ ಧ್ವಜ ರಥ ಹಯವನಾ ಶಲ್ಯ॥ ೪೯

ಧನುವನೆರಡಂಬಿನಲಿ ಮಗುಳೆ
ಚ್ಚನು ಮಹೀಶನ ಸಾರಥಿಯ ಮೈ
ನನೆಯೆ ನವ ರುಧಿರದಲಿ ಮರಳೆಚ್ಚನು ಯುಧಿಷ್ಠಿರನ।
ಮನನ ಶಾಸ್ತ್ರ ಶ್ರವಣ ನಿಯಮಾ
ಸನ ಸಮಾಧಿ ಧ್ಯಾನ ವಿದ್ಯಾ
ವಿನಯವಲ್ಲದೆ ರಣದ ಜಂಜಡವೇಕೆ ನಿಮಗೆಂದ॥ ೫೦

ಉಡಿದು ಬಿದ್ದುದು ಚಾಪ ಸಾರಥಿ
ಕಡಿವಡೆದು ರಥ ನುಗ್ಗುನುಸಿಯಾ
ಯ್ತಡಗುದಱಿಯಾಯ್ತಶ್ವಚಯ [1]ಸಜ್ಜೋಡು ತಡಿ ಸಹಿತ[1]॥
ನಡುಗಿತರಿಬಲವವನಿಪತಿ ಕಾ
ಲ್ನಡೆಗೆ ಬಂದನು ಮತ್ತೆ ರಥನಂ
ಗಡವ ಮೇಳೈಸಿದನು ನಗುತಡರಿದನು ಮಣಿರಥವ॥ ೫೧

ಬೊಬ್ಬಿಱಿದುದಾ ಸೇನೆ ರಾಯನ
ಸರ್ಬದಳ ಜೋಡಿಸಿತು ಸೋಲದ
ಮಬ್ಬು ಹರೆದುದು ಜಯದ ಜಸವೇಱಿದನು ನರನಾಥ[2]।
ಉಬ್ಬಿದನು ಸತ್ಕ್ಷತ್ರತೇಜದ
ಗರ್ಭ ಗಾಡಿಸಿತಾರಿ ಮಿಡಿದನು
[3]ತೆ[3]ಬ್ಬಿನಸ್ತ್ರವ [4]ತೂಗಿ ತುಳುಕಿ[4]ದನಂಬಿನಂಬುಧಿಯ॥ ೫೨

ಕಾದುಕೊಳು ಮಾದ್ರೇಶ ಕುರುಬಲ
ವೈದಿಬರ[5]ಲಿಂದಿನಲ[5] ನಿನ್ನಯ
ಮೈದುನನ ಕಾಣಿಕೆಯಲೇ ಸಂಘಟನೆಗಿವೆ ಸರಳು।
ಕೈದುಕಾ[6]ತಿ[6]ಯರುಂಟೆ ಕರೆ ನೀ
ನೈದಲಾರೆಯೆನುತ್ತ ಮೂನೂ
ಱೈದು ಶರದಲಿ ಕಡಿದನಾ ಸಾರಥಿಯ ರಥ ಹಯವ॥ ೫೩

---

[1] ಬಿಡೆಜೋಡು ತನುವಿನಲಿ (ಕ), ಸಜ್ಜೊಡೆದು ದಡಿಸಹಿತ (ಖ.ಘ.ಟ), ಬಂಜೋಡು ತಡಿಸಹಿತ (ತ.ದ.ಪ). [2] ದುದು ನರಪತಿಗೆ (ಕ). [3] ತು (ಕ). [4] ತುಳುಕಿ ತುಡುಕಿ (ಕ). [5] ಲನ್ನಿದಿರಿನಲಿ (ಕ). [6] ಱ (ಖ).

ತೇರು ಹುಡಿಹುಡಿಯಾಯ್ತು ಹೂಡಿದ
ವಾರುವಂಗಳನಲ್ಲಿ ಕಾಣೆನು
ಸಾರಥಿಯ ತಲೆ [1]ನೆಲ[1] ದೊಳದ್ದುದು ಮಿದುಳ ಜೊಂಡಿನಲಿ।
ಆರಿ ಬೊಬ್ಬಿಱಿದರಸನೆಸಲು
ಬ್ಬಾರದಲ್ಲಿ ಕಣೆಯಡಸಿದವು ಕೈ
ವಾರವೇಕೆ ಭಡಾಳಿಸಿತು ಚಪಳತೆ ಯುಧಿಷ್ಠಿರನ ॥* ೫೪

ಅರಸ ಕೇಳೈ ಬಳಿಕ ಮಾದ್ರೇ
ಶ್ವರನ ರಥ ಸಾರಥಿ ವಿಸಂಚಿಸ
ಲುರಿದನಧಿಕಕ್ರೋಧಶಿಖಿ ಪಲ್ಲೈಸಿತಕ್ಷಿಯಲಿ।
ಕುರುಬಲದ ತಲ್ಲಣವನುಱೆ ಸಂ
ಹರಿಸಿ ಹರಿಗೆಯಡಾಯುಧದಲರಿ
ಧರಣಿಪನ ಮೇಲ್ವಾಯ್ದು ಹೊಯ್ದನು ರಥ ಹಯಾವಳಿಯ ॥ ೫೫

ವಾರು[2]ವನ ವೈಚಿತ್ರಗತಿಯ ನಿ[2]
ಹಾರದಲಿ ಸಾರಥಿ ನರೇಂದ್ರನ
ತೇರ ತಿರುಗಿಸಿದನು ವಿಘಾತಿಯಲೊಂದು ಬಾಹೆಯಲಿ।
ಆರಿ ಹೊಯ್ದನು ಹಯವನಗ್ಗದ
ವಾರಣಾವಳಿಗಳ ಪದಾತಿಯ
ತೇರ ತೆಕ್ಕೆಯನಿಕ್ಕಿದನು ಪ್ರತ್ಯೇಕಸಾವಿರವ॥ ೫೬

ಮಱೆತ ಧೃಷ್ಟದ್ಯುಮ್ನನನು ಭಯ
ಗೊಳಿಸಿ ಸೋಮಕ ಸೃಂಜಯರನ
ಪ್ಪಳಿಸಿದನು ಸಾತ್ಯಕಿ ಯುಧಾಮನ್ಯೂತ್ತಮೌಜಸರ।
[3]ದಳದೊಳೋಡಿಸಿ ಮುಱಿದು[3] ಚಾತು
ರ್ಬಲವ ಸವಱಿ ಶಿಖಂಡಿ ನಕುಲರ
ಹೊಲಬುಗೆಡಿಸಿ ಮಹೀಪತಿಯ [4]ಪಡಿಮುಖಕೆ ಮಾಱಾಂತ[4] ॥ ೫೭

ಏನು ಯುಧಿಷ್ಠಿರ ಹಲಗೆ ಖಡ್ಗವ
ಕುಸುರಿದಱಿಯಾ ಚಾಪವಿದ್ಯಾ
ಕುಶಲನೆಂಬರಲೈ ತನುತ್ರ ರಥಂಗಳಿಲ್ಲೆಮಗೆ।

---

[1] ಕಳ (ಪ), ಕಣ (ಟ.ದ). * ಈ ಪದ್ಯ (ಖ) ಪ್ರತಿಯಲ್ಲಿಲ್ಲ. [2] ವನಹೆತ್ತೆ ಸರದ ಹೊಯ್ಲಿನ (ಘ.ಟ.ದ.), ವಂಗಳವೈರಿಕದಸಂ (ತ). [3] ದಳದಲೊದ್ದಿದ ಮುರಿದ (ಕ), ಬಲವನೋಡಿಸಿ ಮುರಿದು (ಖ), ತಳದಲೋಡಿಸಿ ಮುರಿದು (ಗ.ಘ.ದ.ಪ). [4] ಸಮ್ಮುಖಕೆ ಮಂಡಿಸಿದ (ಕ).

ಅಸುವ ತಡೆವರೆ ರಣಪಲಾಯನ
ವೆಸೆವುದೇ ಕ್ಷತ್ರಿಯರಿಗೆತಿಸಾ
ಹಸಿಕನಾದಡೆ ನಿಲ್ಲೆನುತ ಮೂದಲಿಸಿದನು ಶಲ್ಯ॥ ೫೮

ಅಕಟಕಟ ಧರ್ಮಜನನೀ ಕಂ
ಟಕಕೆ ಕೈವರ್ತಿಸಿದರೇ ಪಾ
ತಕರು ಪಾಂಡವರೆನುತ ಕುರುಬಲವೆಲ್ಲ ಸಮತಳಿಸೆ।
ವಿಕಟರೋಷಶಿಖಿಸ್ಫುಲಿಂಗ
ಪ್ರಕಟಭೀಷಣಸಹಿತಕೌಕ್ಷೇ
ಯಕವ ಖಂಡಿಸಿ ಧರೆ ಬಿರಿಯೆ ಬೊಬ್ಬಿಱಿದನಾ ಭೀಮ॥ ೫೯

ಲೇಸ ಮಾಡಿದೆ ಭೀಮ ಕಟ್ಟಾ
ಳೈಸಲೇ ನೀನವರೊಳಗೆ ನಿ
ನ್ನಾಸೆ[1]ಯಲ್ಲಾ[1] ಧರ್ಮಪುತ್ರನ ಸತ್ವಸಂಪದಕೆ।
ಐಸೆ ಬಳಿಕೇನೆನುತ ಶಲ್ಯಮ
ಹೀಶ ಮುರಿಯಲು ಹೊಸ ರಥವ ಮೇ
ಳೈಸಿ ಸಾರಥಿ ಸಂಧಿಸಿದನವಧಾನ ಜೀಯೆನುತ॥ ೬೦

ರಥಕೆ ಬಂದು ಪಸಾಯವನು ಸಾ
ರಥಿಗೆ ಕೊಟ್ಟನು ಚಾಪಶರವನು
ರಥದೊಳಗೆ ತುಂಬಿದನು ನಂಬಿಸಿದನು ಸುಯೋಧನನ।
ಪೃಥೆಯ ಮಕ್ಕಳ ರಣಪರಾಕ್ರಮ
ವೃಥೆ ಕಣಾ ಕರ್ಣಾದಿ ಸುಭಟ
ವ್ಯಥೆಯ ನಿಲಿಸುವೆನೆನುತ ಮೂದಲಿಸಿದನು ಧರ್ಮಜನ॥ ೬೧

ಸಾರಥಿಗೆ ಸೂಚಿಸಿ ನೃಪಾಲನ
ಸಾರೆ ದುವ್ವಾಳಿ[2]ಸಲು ಮಿಗೆ [2] ನೃಪ
ನೋರೆ[3]ಗೊಂಡನು ತಿರುಗೆ ತಿರುಗಿದನೊಲೆದೊಡೊಡನೊಲೆದು[3]।
ಚೂರಿಸುವ ನಾರಾಚವಿಕ್ರಮ
ದೋರಣಿಗೆ ನಾರಾಚಿಸಿತು ವಿ
ಸ್ತಾರದಲಿ ವಿಸ್ತರಿಸಿದನು ಜಯಸಮರಸಾಹಸವ॥ ೬೨

---

1 ಯಿದರಾ (ಕ). 2 ಸೆ ರಥವ (ಕ), ಸಿತುಮಿಗೆ (ಖ), ಸಲುಅರಿ (ತ).
3 ಗೊಲೆದನು ತಿರುಗಿದಡೆ ಪೊಡನೊಲೆದನಾಶಲ್ಯ (ಕ), ಗೊಲೆದನು ತಿರುಗೆ ತಿರುಗಿದ ಪೊಲೆದರೊಡನೊಲೆದ (ಘ).

ಹಿಂದೆ ಕರ್ಣನು ಫಲುಗುಣನು ಬಳಿ
ಕಿಂದು ಶಲ್ಯಯುಧಿಷ್ಠಿರರು ಸಾ
ನಂದದಲಿ ಸಮತಳಿಸಿ ಕಾದಿದರುಭಯಬಲ ಹೊಗಳೆ।
ಇಂದು ಮಾದ್ರಾಧೀಶ್ವರಗೆ ಯಮ
ನಂದನನು ಯಮಸುತಗೆ ಪಡಿ ತಾ
ಸಂದನೈ ಮಾದ್ರಾಧಿಪತಿಯೆಂದುದು ಭಟಸ್ತೋಮ॥ ೬೩

ಅರಸ ಕೇಳೈ ಕೃಷ್ಣಶಕ್ತಿ
ಸ್ಫುರಣವೈಸಲೆ ನಿಮ್ಮ ಬಲ ಸಂ
ಹರಣಕಾವುದು ಬೀಜ ನಿರ್ದೈವರ ವಿಲಾಸವಿದು।
ಹರಿ ಯುಧಿಷ್ಠಿರ ನೃಪನನೆಕ್ಕಟಿ
ಗರೆದು ನಿಜಶಕ್ತಿಪ್ರಯೋಗವ
ನೊರೆದಡೊಡಬಟ್ಟನು ಹಸಾದದ ಮಧುರವಚನದಲಿ॥ ೬೪

ಆಯಿದನು ಶಸ್ತ್ರಾಸ್ತ್ರದಲಿ ದಿ
ವ್ಯಾಯುಧವನರೆಬಳಿದ ವರ ತಪ
ನೀಯರೇಖೆಯ [1]ಕುಣಿವ[1] ಗಂಟೆಯ ಹೊಳೆವ ಹೊಂಗಳಿಯ।
ಬಾಯಿಧಾರೆಯ ತೈಲಲೇಪನ
ದಾಯತದ ಚೌರಿಗಳ ರಿಪುಭಟ
ನಾಯುಷದ ಕಡೆ[2]ವಗಲ[2] ಭುಕ್ತಿಯ ಶಕ್ತಿಯನು ನೃಪತಿ॥ ೬೫

ತುಡುಕಿದನು [3]ಹೊಸ[3]ರವಿಯ ತೇಜದ
ದಡಿಯನುಗಿದಂದದಲಿ [4]ಹೊಳೆಹೊಳೆ
ವುಡುನಿಕರವುಚ್ಚಳಿಪವೊಲು[4]ಮಣಿಮಯದ ಕಾಂತಿಗಳ।
ಕುಡಿವೊನೆಯ ಪಡಿಮುಖದಲೊದಳುವ
ಕಿಡಿಯ ಘಂಟಾರವದ ರಭಸದ
ಝುಡಪದಲಿ ಜೋಡಿಸಿದ ಶಕ್ತಿಯಲಟ್ಟನವನೀಶ॥ ೬೬

ಇದಿರೊಳೆಚ್ಚನು ಶಲ್ಯನಂಬಿನ
ಹೊದೆ ಸವೆಯೆ ಹರಿತಪ್ಪ ಶಕ್ತಿಯ
ತುದಿಗೆ ಕಬಳಗ್ರಾಸವಾದುದಲೈ ವಿಚಿತ್ರವಲಾ।

[1] ಕುಣಿಕೆ (ಕ), ಉಲಿವ (ಘ.ಟ.ದ.) [2] ಹೊನ್ನ (ಕ). [3] ಶತ (ಕ).
[4] ಹೊಳೆವುದು ಬಿಡದೆ ಪ್ರಜ್ವಲಿಸಿಪ್ಪ ಹೊಸ (ಕ).

ಹೊದಱುಗಿಡಿಗಳ ಕೇಸುರಿಯು ಹಾ
ರದಲಿ ಹರಿತಂದಹಿತ ದಳಪತಿ
ಯೆದೆಯನೊದೆದುದು ನೆಲಕೆ ನೆಟ್ಟುದು ನಾಲ್ಕು ಮುಷ್ಟಿಯಲಿ॥ ೬೭

ಕಾಱಿದನು ರುಧಿರವನು ಧರಣಿಗೆ
ಹಾಱಿ ಬಿದ್ದನು ಮಾದ್ರಪತಿಯೆದೆ
ಡೋಱಿನಲಿ ಡಾವರಿಸಿದವು ರಕ್ತಾಂಬುಧಾರೆಗಳು।
ಮೀಱಿತಸು ಕಂಠವನು ನಾಸಿಕ
ಕೇಱಿದುದು ನಿಟ್ಟುಸುರು ನಿಮಿಷಕೆ
[1]ಚೀ[1]ಱಿದುದು ಕುರುರಾಯ:ದಳ ಶಲ್ಯಾವಸಾನದಲಿ॥ ೬೮

ಅಹಹ ಸೇನಾಪತಿಯು ಮಗ್ಗುಲು
ಮಹಿಗೆ ಬಿದ್ದುದು ಬೆಟ್ಟಿತೀಡೆಯು
ಬಹಳಬಲರಿನ್ನಾರು ಕುರುಸೇನಾಧುರಂಧರರು।
ಮಿಹಿರಸುತ ಗುರು ಭೀಷ್ಮರಲಿ ಸ
ನ್ನಿಹಿತನಾದನು ಶಲ್ಯನೆ[2]ನೆ ಕಿಂ
ಗಹನವೀ[2] ರಣವೆನುತ ಶಲ್ಯಾನುಜನು ಮಾಱಾಂತ॥ ೬೯

ಗೆಲವು ನಿನಗಾಯ್ತರಸ ಹರಿಬಕೆ
ನಿಲುಕಿದೆನ್ನನು ಸಂತವಿಸಿ ನಿಜ
ಬಲದಲೊಸಗೆಯ ಮಾಡಿಸಾ ಮಾದ್ರೇಶಮಾರಣವ।
ಅಳುಕದಿದಿರಾಗೆನುತ ಬಾಣಾ
ವಳಿಯ ತವಿಸೆ ನಿರಂತರಾಸ್ತ್ರದ
ಜಲನಿಧಿಗೆ ವಡಬಾಗ್ನಿಯಾದನು ನಗುತ ಯಮಸೂನು॥ ೭೦

ಆತನಸ್ತ್ರವ ಮುಱಿಯೆಸುತ ರಥ
ಸೂತ ಹಯವನು ತಱಿದು ಬಾಣ
ವ್ರಾತದಲಿ ಶಲ್ಯಾನುಜನ ಹೂಳಿದನು ಹರಹಿನಲಿ।
ಈತನನು ಕೆಡಹಿದನು ಸಾಲ್ವಮ
ಹೀತಳಾಧಿಪನವನ ಹರಿಬಕೆ
ಭೂತಳೇಶನ ಕೆಣಕಿ ಕಂಡನು ವರ ಸುರವ್ರಜವ॥ ೭೧

---

[1] ಜಾ (ಕ), ಶೀ (ಖ), ಸೀ (ತ). [2] ನಲನ್ನಹವೀ (ಕ), ನಗಿದು ಗಹನವೇ (ಗ.ಟ.ತ.ದ).

ಅರಿ ಹೊಕ್ಕುದು ಶಲ್ಯನೃಪಪರಿ
ವಾರ ಮಾದ್ರದ ನಾಯಕರು ಜು
ಜ್ಝಾರ ಮನ್ನೆಯ ಮಂಡಳಿಕ ಸಾಮಂತಸಂದೋಹ |
ಭೂರಿಬಲ ಸಾಲ್ವನ ಭಟಾವಳಿ
ರುಧಟೆಯಲಿ ನೂಕಿದುದು ವಿ
ಸ್ತಾರಿಸಿತಲ್ಲಿ ಧರ್ಮನಂದನನೊಡನೆ ಬಲುಸಮರ || ೭೨

ಕೇಳಿದನು ಕುರುರಾಯ ಮಾದ್ರನೃ
ಪಾಲನವಸಾನವನು ಕರಸಿದ
ನಾಳು ಕುದುರೆಯ ರಥ ಮದೋತ್ಕಟ ಗಜಘಟಾವಳಿಯ |
ಮೇಳವದ [1]ಮೋಡಿ[1]ಯಲಿ ರಥ ದು
ವ್ವಾಳಿಸಿತು ಘಡ ಪಾಂಡುತನುಜರ
ಸಾಲ ಹೊಯ್ ಹೊಯ್ಯೆನುತ ಹೊಕ್ಕನು ಲಳಿಯ ಲಗ್ಗೆಯಲಿ || ೭೩

ರಾಯನೊಡನೆ ಸಮಸ್ತಬಲವಡು
ಪಾಯಲೌಕಿತು ಪಾರ್ಥ ಸಾತ್ಯಕಿ
ವಾಯುಸುತರಾಚೆಯಲಿ[2]ಮೇಳೈಸಿತ್ತು[2]ನೃಪಸೇನೆ |
ನಾಯಕದ ಸೂರಿಗಳ ಸಬಳದ
ಪಾಯದಳ ರಥ ವಾಜಿ [3]ಗಜಘಟೆ
ಲಾಯಶುದ್ಧದ ತೇಜಿ ಹೊಕ್ಕವು ವಾಘೆಸರಿಸದಲಿ[3] || ೭೪

ಥಟ್ಟನೊಡಹೊಯ್ದವನಿಪತಿ ಜಗ
ಜಟ್ಟಿಗಳ ಕೆಣಕಿದನು ನಕುಲನ
ನಟ್ಟಿದನು ಸಹದೇವನಡಹಾಯ್ದರೆ ವಿಭಾಡಿಸಿದ |
ಬಿಟ್ಟ ಧೃಷ್ಟದ್ಯುಮ್ನನನು ಹುಡಿ
ಗುಟ್ಟಿದನು ಸಾತ್ಯಕಿಯ ಜೋಡಿನ
ಲೊಟ್ಟಿದನು ಕೂರಂಬುಗಳನುಬ್ಬಿನಲಿ ಕುರುರಾಯ || ೭೫

ಮರಳಿ ಪಂಚದ್ರೌಪದೇಯರ
ಪರಿಭವಿಸಿದನು ಧರ್ಮಪುತ್ರನ
ತೆರಳಿಚಿದ ಸಹದೇವ ನಕುಲರ ಮತ್ತೆ ಸೋಲಿಸಿದ |

[1] ರೂಢಿ (ಕ), ವೇಢೆ (ತ). [2] ನಿಲಲೆನುತ (ಘ.ದ.ಪ). [3] ಗಳು ನುತ ರಾಯರಾವುತರೌಕಿ ಹೊಕ್ಕುದು ತುಳಿದು ಪರಬಲವ (ಕ).

ವರ ಯುಧಾಮನ್ಯೂತ್ತಮೌಜರ
ಹೊರಳಿಸಿದನವನಿಯಲಿ ಭೀಮಾ
ದ್ಯರಿಗೆ ಭೀತಿಯ ಬೀಱಿದನು ಬೇಸಱದೆ ಕುರುರಾಯ॥ ೭೬

ಕೆದಱುತದೆ ನಮ್ಮವರ ದಳ ದೊರೆ
ಯದಟು ಸುಕ್ಕಿತು ರಾಯನೊಬ್ಬನೆ
ಕದನದಲಿ ಕೈದೋಱಿ [1]ಭಂಗಿ[1]ಸಿದನು ಮಹಾರಥರ।
ಹೊದಱು ತಳಿತುದು ಲಗ್ಗೆವಱೆ ಮೋ
ನದಲಿ ಮಗುಳ್ದುವು ಪಾರ್ಥ ದಿವ್ಯಾ
ಸ್ತ್ರದಲಿ ಕೈಮಾಡೆಂದು ನುಡಿದನು ವೀರನಾರಯಣ॥ ೭೭

ಮೂಱನೆಯ ಸಂಧಿ ಮುಗಿದುದು.

ಇತಿ ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಪ್ಷಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ
ಕರ್ಣಾಟಭಾರತಕಥಾಮಂಜರಿಯೊಳ್
ಶಲ್ಯಪರ್ವಂ ಸಮಾಪ್ತಂ.

---

[1] ಖಂಡಿ (ಕ).

# ಕನ್ನಡ ಮಹಾಭಾರತ

## ಗದಾಪರ್ವ

### ಮೊದಲನೆಯ ಸಂಧಿ

**ಸೂಚನೆ॥** ಶಲ್ಯನವಸಾನದಲಿ ಕೌರವ
ಮಲ್ಲ [1]ದಳಪತಿಯಾಗಿ ರಣದಲಿ[1]
ನಿಲ್ಲದಡಗಿದ [2]ನಿ[2]ತ್ತ ಸಂಜಯ ಬಂದನಾಹವಕೆ ॥

ಕೇಳು ಧೃತರಾಷ್ಟ್ರಾವನಿಪ ಸಿರಿ
ಲೋಲನಹಿತರ್ಜುನನು ಸೇನಾ
ಜಾಲವನು ಸಂತೈಸಿ ದೊರೆ ಸುಯ್ಧಾನವೆಂದೆನುತ ।
ಆಳೊ[3]ಡನೆ[3] ಬೆರಸಿದನು ಕುರುಭೂ
ಪಾಲಕನ ಥಟ್ಟಿನಲಿ ಶಸ್ತ್ರ
ಜ್ವಾಲೆಗಳ ಕೆದಱಿದನು ಹೊದಱಿನ ಹಿಂಡ ಹರೆಗಡಿದ ॥ ೧

ಎಲವೊ ಕಪಟದ್ಯೂತಕೇಳೀ
ಕಲುಷಿತಾಂತಃಕರಣ ನಿಸ್ಸೀ
ಬಲಕೆ ಪತಿ ನೀನೋ ಕೃಪಾಚಾರಿಯನೊ ಗುರುಸುತನೊ ।
ಖಳ ಸುಶರ್ಮನೊ ಶಕುನಿಯೋ ನಿ
[4]ನ್ನುಳಿದವೊ[4]ಡವುಟ್ಟಿದರೊ ರಾಜಾ
ವಳಿಯೊಳಾರಳಲಿಗರೆನುತ ತೆಗೆದೆಚ್ಚನಾ ಪಾರ್ಥ ॥ ೨

---

[1] ದಳದಲಿ ಕಾದಿ ಮರಳಿದು (ಕ). [2] ಡಿ (ಕ). [3] ಳೊಡೆ (ಕ).
[4] ಮ್ಮುಳಿಕರೊ (ತ).

ಅರಸ ಕೇಳೈ ಮೂಱು ಸಾವಿರ
ಕರಿಘಟೆಗಳಿಪ್ಪತ್ತು ಸಾವಿರ
ತುರಗದಳ ರಥವೆರಡುಸಾವಿರ ಲಕ್ಷ ಕಾಲಾಳು ।
ಅರಸುಗಳು ಮೂನೂಱು ನಿಂದುದು
ಕುರುಬಲದ ವಿಸ್ತಾರ ಕೌರವ
ಧರಣಿಪತಿಯೇಕಾದಶಾಕ್ಷೋಹಿಣಿಯ ಶೇಷವಿದು ॥ ೩

ಕರಿಘಟೆಗಳೈನೂಱು ಮೂವ
ತ್ತೆರಡು ಸಾವಿರ ಪಾಯದಳ ಸಾ
ವಿರದ ನೂಱು ವರೂಥ ವಂಗಡದವನಿಪರು ಸಹಿತ ।
ತುರುಕ ಬರ್ಬರ ಪಾರಸೀಕರ
ತುರಗವೈಸಾವಿರ ಸಹಿತ ಮೋ
ಹರಿಸಿ ನಿಂದನು ಶಕುನಿ ಥಟ್ಟಿನ ಬಲದ ಬಾಹೆಯಲಿ ॥ ೪

ನೂಱು ರಥವಿನ್ನೂಱು ಗಜವೈ
ನೂಱು ಹಯವೈಸಾಸಿರದ ಮೂ
ನೂಱು ಸುಭಟರು ಸಹಿತ ಮೋಹರದೆರಡು ಬಾಹೆಯಲಿ ।
ತೋಱಿದರು ಕೃತವರ್ಮ ಕೃಪರೈ
ನೂಱು ಗಜ ಗುರುತನುಜ ಸಹಿತೀ
ಮೂಱುದಳಕೊತ್ತಾಗಿ ನಿಂದನು ಕೌರವರರಾಯ ॥* ೫

ಕವಿದುದಿದು ದುವ್ವಾಳಿಸುತ ರಥ
ನಿವಹ ಬಿಟ್ಟವು ಕುದುರೆ ಸೂಠಿಯ
ಲವಗಡಿಸಿ ತೂಳಿದವು ಹೇರಾನೆಗಳು ಸಂದಣಿಸಿ ।
ಸವಡಿವೆರಳಲಿ ಸೇದುವಂಬಿನ
ತವಕಿಗರು ತಱಿಬಿದರು ಬಲುಬಿ
ಲ್ಲವರು ಮೊನೆಮುಂತಾಗಿ ಮೋಹಿತು ಮಿಕ್ಕ ಸಬಳಿಗರು ॥ ೬

ರಣಪರಿಚ್ಛೇದಿಗಳು ಮಿಗೆ ಸಂ
ದಣಿಸಿತೋ ಕುರುಸೇನೆ ವಾದ್ಯದ
ರಣಿತವದ್ರಿಯನೊದೆದುದದುಭುತ ಬೊಬ್ಬೆಗಳ ಲಳಿಯ ।

* (ಖ) ಪ್ರತಿಯಲ್ಲಿ ಈ ಪದ್ಯದ ಪೂರ್ವೋತ್ತರಾರ್ಧಗಳು ಹಿಂದುಮುಂದಾಗಿದೆ.

ಕುಣಿದವರ್ಜುನನುರುರಥದ ಮುಂ
ಕಣಿಯಲಾರೋಹಕರು ರಥ ಹಯ
ಹೆಣಗಿದವು ಹಯದೊಡನೆ ಕಂದದ ಖುರದ ಹೊಯ್ಲಿನಲಿ॥ ೭

ಸುತ್ತುವಲಗೆಯು ಮೇಲೆ ಕಣೆಗಳ
ತೆತ್ತಿಸಿದ[1]ರೀಚಿ[1]ನಲಿ ಸಬಳಿಗ
ರೆತ್ತಿದರು ರಾವುತರು ಕೀಲಿಸಿದರು ರಥಧ್ವಜವ ।
ಮುತ್ತಿದವು ಗಜಸೇನೆ ಪಾರ್ಥನ
ತೆತ್ತಿಗರ ಬರಹೇಳು ವೇಢೆಯ
ಕಿತ್ತು ಮಗುಚುವರಾರೆನುತ [2]ಮುಸುಕಿತ್ತು ಕುರುಸೇನೆ[2]॥ ೮

ಅರಸ ಕೇಳೈ ಬಳಿಕ ಪಾರ್ಥನ
ಕೆರಳಿಚಿದರೋ ಕಾಲರುದ್ರನ
ಸರಸವಾಡಿದರೋ ಪ್ರಚಂಡಪ್ರಳಯಭೈರವನ ।
ಪರಿಭವಿಸಿದರೊ ಲಯಕೃತಾಂತನ
ಕರೆದರೋ ಮೂದಲಿಸಿ ನಾವಿ
ನ್ನುಳಿಯೆವರ್ಜುನನೆಸುಗೆಯಭಿವರ್ಣನೆಯ ನಿರ್ಣಯವ॥ ೯

ಎಡದಲೌಕಿದ ಭಟರನಾ ವಂ
ಗಡದ ರಾವುತರ ಸಮ್ಮುಖದೊಳವ
ಗಡಿಸಿದಾನೆಯ ಥಟ್ಟಿನಾ ತೇರುಗಳ ಸಮರಥರ ।
ಕಡಿದನೊಂದೇ ಸರಳಿನಲಿ ಚಿನ
ಕಡಿಗಳೆದು ರುಧಿರಾಂಬುರಾಶಿಯೊ
ಳಡಗಿಸಿದ ಚತುರಂಗಬಲವನದೊಂದು ನಿಮಿಷದಲಿ॥ ೧೦

ಅಳಿದವಿನ್ನೂಱಾನೆ ಸರಳ
ಚ್ಚಳಿಸಿದವು ಮೂನೂಱು ಪುನರಪಿ
ಮಲಗಿದವು ನೂಱಾನೆ ಕೆಡೆದವು ತಾಱುಥಟ್ಟಿನಲಿ ।
ಬಳಿಕ ನೂಱು ನಿರಂತರಾಸ್ತ್ರಾ
ವಳಿ ವಿಘಾತಿಗೆ ನೂಱು ಲೆಕ್ಕವ
ಕಳೆದಪನ್ನೂಱಾನೆ ಪಾರ್ಥನ ಕೋಲ ತೋಹಿನಲಿ॥ ೧೧

---

[1] ವೀಸಿ (ಖ.ತ.) [2] ತಲ್ಲಣಿಸಿತರಿಸೇನೆ (ಘ.ತ.ಪ).

ರಥ ಮುಱಿದುವೈನೂಱು ತತ್ಸಾ
ರಥಿಗಳಳಿದುದು ನೂಱು ಮಿಕ್ಕುದು
ರಥವನಿಳಿದೋಡಿದುದು ಸಮರಥರೆಂಟುನೂಱೈದು।
ಪೃಥವಿಗೊಱಗಿದುವೆಂಟು ಸಾವಿರ
ಪೃಥುಳ ಹಯ ನುಗ್ಗಾಯ್ತು ಗಣನೆಯ
ರಥ ಪದಾತಿಯೊಳಿತ್ತಲಿನೆ ಸವಱಿದನು ಪರಬಲವ॥ ೧೨

ಒದೆದು ರಥವನು ಸೂತರಿಳಿದೋ
ಡಿದರು ಚಾಪವನಿಳುಹಿ ಸಮರಥ
ರೆದೆಯ ನೀವಿತು ದೂರದಲಿ ಕರಿಕಂಧರವನಿಳಿದು।
ಕೆದಱಿತಾರೋಹಕರು ವಿಕ್ರಮ
ವಿದಿತ ವಿಪುಳ ಪದಸ್ಥಭೂಪರು
ಹುದುಗಿತಲ್ಲಿಯದಲ್ಲಿ ಪಾರ್ಥನ ಸರಳ [1]ಘಾತಿಯಲಿ[1]॥ ೧೩

ಬಿರುದ ಬಿಸುಟರು ಧ್ವಜದ ಕಂಬವ
ಹಱಿಯ ಹೊಯ್ದರು ಕಾಲ ತೊಡರನು
[2]ಧರೆಗೆ ಬಿಸುಟರು ಹಡಪ ಬಾಹಿಯ[2] ಚಮರಧಾರಿಗರ।
[3]ದೊರೆಗಳುಳಿದರು ಬೆದಱಿ ರಥದಲಿ
ಕರಿಗಳಲಿ ವಾರುವದಿನಿಳೆಗು
ಪ್ಪರಿಸಿದರು ಹರಹಿನಲಿ ಹಾಯ್ದರು ಹೊತ್ತ ದುಗಡದಲಿ[3]॥ ೧೪

ಬೆದಱಿ ಗಜ ಮುಂಡಾಸನದಲೋ
ಡಿದುವು ಚಮರೀಮೃಗದವೊಲು ಬಲು
ಗುದುರೆ [4]ಹಾಯ್ದುವು ಕಂದದಲಿ[4] ಬಲುನೊಗನ[5]ನನಬಡಿದು[5]।
ಕುದುರೆಯುಳಿದವು ಬರಿರಥವನೋ
ಡಿದ ಪದಾತಿಯ ಬಿಸುಟ ಕೈದುವ
ಹೊದೆದುದಿಳೆ ಕಳನಗಲದಲಿ ಕಂಡೆನು ಮಹಾದ್ಭುತವ ॥ ೧೫

ಮರಳಿವಾಘೆಯ ಕೊಂಡು ರಾವ್ತರು
ತಿರುಗಿದರು ಹಮ್ಮುಗೆಯ ನೇಣ್ಗಳ
ಹರಿದು ಹಕ್ಕರಿಕೆಗಳ ಬಿಸುಟರು ಹಾಯ್ಕಿ ಖಂಡೆಯವ।

---

[1] ಸರಿವಳೆಗೆ (ಗ.ಟ.ದ). [2] ಧರೆಯೊಳಿಟ್ಟರು ಚಪಳಚಾಹಿಯ (ಗ.ಫ.ತ.) [3] ಸುರಗಿಯನು ಸೆಕ್ಕಿದರು ರಥದಲಿ। ಕರಿಗಳಲಿ ವಾರುವದಿನಿಳೆಗು। ಪ್ಪರಿಸಿದರು ಹರಹಿನಲಿ ಹಾಯ್ದರು ಹೊತ್ತ ಮುಸುಕಿನಲಿ॥ (ಗ.ಫ.ಟ.ದ.ತ). [4] ಬಿಟ್ಟೋಡಿದವು ಕಂದದ (ಗ.ಫ.ದ). [5] ನೀಡಾಡಿ (ಟ).

ಬಿರುದ ಸಂಭಾಳಿಸುವ ಭಟ್ಟರ
ನಿಱುದರಾರೋಹಕರು ಕರಿಗಳ
ತಿರುಹಿ ಗುಳ ಱೆಂಚೆಗಳ ಕೊಯ್ದೀಡಾಡಿದರು ನೆಲಕೆ॥ ೧೬

ರಾಯ ಕೇಳ್ಳೈ ಬಲದ ಬಾಹೆಯ
ನಾಯಕರು ಜಾಱಿದರು ವಾಮದ
[1]ಜೇಯ ಸುಭಟರು[1] ಸಿಡಿದು ತರಹರಿಸಿದರು ದೂರದಲಿ।
ರಾಯ ಕಂಡನು ಬಳಿಕ ಬಲದ ಪ
ಲಾಯನದ ಪರಿವಿಡಿಯನಸುವಿನ
ಬೀಯಕಿವರಂಜಿದರೆನುತ ಮೂದಲಿಸಿದನು ನೃಪರ॥ ೧೭

ಎಲೆ ಮಹೀಪತಿಗಳಿರ ಪುಣ್ಯ
ಸ್ಥಳ ಕುರುಕ್ಷೇತ್ರವು ಮಹಾನ
ತ್ಕುಲದೊಳಗೆ ಜನನವು ನಿಮಗೆ ವೀರಕ್ಷತ್ರಿಯೋತ್ತಮರು।
ಅಳುಕದಂಘೈಸಿದಡೆ ಸುರಸಂ
ಕುಲದ ಸೇರುವೆ ತಪ್ಪಿದರೆ ನೀ
ವಿಳಿವಿರೈ ರೌರವದೊಳಾವುದು ಲಾಗು ನಿಮಗೆಂದ॥ ೧೮

ವೀರಮಾತೆಯರೆಂದು ತಾಯ್ಗಳ
ನಾರು ಕೊಂಡಾಡುವರು ಸತಿಯರು
ವೀರಪತ್ನಿಯರೆಂದು ನುಡಿವರೆ ನಿಮ್ಮ ರಾಣಿಯರ।
ವೀರಸಿರಿ ನಿಮಗೆಂದು ವಂದಿಗ
ಳೋರೆ [2]ಕಟಕಿಯಲೆನ್ನ[2]ರೇ ಕೈ
ವಾರಿಸುವ ಕವಿನಿಕರ ನಾಚದೆ [3]ಶಿವಶಿವಾ ಎಂದ[3]॥ ೧೯

ಸೆರೆನರದ ದರ್ಭೆಗಳ ಮಿದುಳಿನ
ಚರುವಿನೆಲುವಿನ ಸಮಿಧೆಗಳ ಬಿಲು
ದಿರುರವದ [4]ಚತುರಂಗರಭಸದ ಸಾಮವೇದಿಗಳ[4]।
ಅರುಣಜಲದಾಜ್ಯದ [5]ಸ್ರುವಾದಿಯ[5]
ಶಿರಕಪಾಲದ ವೈರಿಪಶುಬಂ
ಧುರದ ಸಂಗರಯಜ್ಞದೀಕ್ಷೆಯ ಮಾಱೆದಿರಕಟೆಂದ ॥ ೨೦

---

[1] ನಾಯಕರು ಕೆಲ (त). [2] ಘೋರೆಯರೆ (क). [3] ನಿಮ್ಮ ನಡೆವಳಿಯ ನೆಂದ (ग.त). [4] ವೋಂಕಾರಬಾದಣ ಮಂತ್ರಸೂಕ್ತಗಳ (ख), ಚತುರಂಗರಥ ಸದ ವಾದ್ಯರಚನೆಗಳ (घ.त). [5] ಸುಪಾತ್ರೆಯ (क).

ಇಲ್ಲಿ ಮನುಜಸ್ತ್ರೀಯ ಮೇಳವ
ವಲ್ಲಿ ಸುರನಾರಿಯರ ರತಿ ನಿಮ
ಗಿಲ್ಲಿ ಭೌಮವಿಭಿನ್ನರಸ ಪೀಯೂಷರಸವಲ್ಲಿ ।
ಇಲ್ಲಿಯಧ್ರುವವಿಭವವಮರತೆ
ಯಲ್ಲಿ ಕಿಲ್ಬಿಷವಿಲ್ಲಿ ಶಿವಮಯ
ವಲ್ಲಿ ನೀವಿಂದೇನ ನೆನೆ[1]ದಿರಿ[1] ಶಿವಶಿವಾ ಎಂದ॥ ೨೧

ಆವ ಭವದಲಿ ನಿಮ್ಮ ರಾಜ್ಯವ
ದಾವ ಭವದಲಿ ಪುತ್ರಮಿತ್ರರ
ದಾವ ಜನ್ಮಂಗಳ ಸಮಾಗಮ ನಿಮ್ಮ ರಾಣಿಯರು ।
ಈ ವಿಡಂಬನ[2]ದೈಹಿಕವ[2] ಸಂ
ಭಾವಿ[3]ಸುತ[3] ಪರಲೋಕಹಿತವನು
ನೀವು ನೆನೆಯದೆ ಕೆಟ್ಟುದಕೆ ಬೆಱಗಾದೆ ನಾನೆಂದ॥ ೨೨

ನೃಪನ ಮೂದಲೆ ನಿಜಕುಲಕ್ರಮ
ಕಪಯಶೋಭಯ ಪಾರಲೌಕಿಕ
ದುಪಹತಿ ಪ್ರತಿಭಟರ ನಗೆ ಸೌಭಟಪರಿತ್ಯಾಗ।
ಕೃಪಣತೆಯ ದುಷ್ಕೀರ್ತಿ ಭುಜಬಲ
ದಪ[4]ದಶಾವಿರ್ಭಾವ[4]ವೀ ಭೂ
ಮಿಪರ ಮರಳಿಚಿತ್ತೇನನೆಂಬೆನು ಭೂಪ ಕೇಳೆಂದ॥ ೨೩

ಕರೆದರೊಬ್ಬರನೊಬ್ಬರುಱೆ ಧಿ
ಕ್ಕರಿಸಿದರು ತಮ್ಮೊಬ್ಬರೊಬ್ಬರ
ಬಿರುದ ಹಿಡಿದರ್ ಬಯ್ದರಪಮಾನಾನುತಾಪದಲಿ।
ತಿರುಗಹೇಳೋ ರಾವುತರ ರಥಿ
ಕರ ಗಜಾರೋಹಕರನೆಂದ
ಬ್ಬರಿಸಿ ಚೌರಿಯ ಬೀಸಿ ಮರಳಿತು ಭೂಪತಿವ್ರಾತ॥ ೨೪

ವಾರುವಂಗಳ ಬಿಗುಹನೇಱಿಸಿ
ವಾರ[5]ಣಂಗಳ[5] ಗುಳವ ಜೋಡಿಸಿ
ತೇರುಗಳ ಕೀಲಚ್ಚು ಕೂಬರಯುಗವ ನಾರೈದು !

---

[1] ವಿರೊ (ಕ.ಟ ದ). [2] ದೇಹವಿದ (ಕ), ವಿಹಿತವನು (ತ). [3] ಸಿಯೊ (ಖ). [4] ಸರಣದುರ್ಭೇದವೀ (ಟ). [5] ಣೌಘದ (ಫ.ತ.ಪ).

ವೀರ[1]ಪಟ್ಟವ[1] ರಚಿಸಿ ಕಂಕಣ
ದಾರವನು ಕಟ್ಟಿದರು ಸಂಗರ
ವೀರಸಿರಿಯ ವಿವಾಹಸಮಯದ ಸೌಮನಸ್ಯದಲಿ ‖ ೨೫

ದೂಪಿಸಿದ ಬಿಳಿದುಗುಳನುಟ್ಟನು
ಲೇಪನಂಗಳ ಹೂಸಿ ಮಧುರಾ
ಳಾಪದಲೆ ಬೋಳೈಸಿ ಸಾರಥಿ ಗಜ ಹಯಾವಳಿಯ ।
ಭೂಪತಿಯ ರಣಯಜ್ಞಮುಖಕೆ ನಿ
ಜಾಪಘನಪೂರ್ಣಾಹುತಿಯ[2]ಲೇ[2]
ಶ್ರೀಪತಿಯ ಸಾಯುಜ್ಯವೆನುತಿದಿರಾಯ್ತು ನೃಪಕಟಕ ‖ ೨೬

ಅಱಿಯಬಹುದೈ ಭಾವವೈದನ
ಮೆಱೆ ಭುಜಾಟೋಪವನು ಹಿಂದಣ
ಕೊಱತೆಯನು ಕಳೆ ಮಗನೆ ಬೊಪ್ಪಕುಲಕ್ರಮಾಗತವ ।
ಮಱೆಯದಿರು ಮುಂ[3]ಗಲಿ[3]ತನಕೆ ತಾ
ನಿಱಿವೆ ನಾ ಮುನ್ನೆಂದು ತಮ್ಮೊಳು
ಜಱೆದರೊಡವುಟ್ಟಿದರು ಬಾಂಧವ ಮಿತ್ರ ಭೂಮಿಪರು ‖ ೨೭

ನೂಕಿತೊಂದೇ ವಾಘೆಯಲಿ ಹಯ
ನಾಕು ಸಾವಿರ ರಥದ ಜೋಡಿಯ
ಜೋಕೆ ಕವಿದುದು ಮೂಱು ಸಾವಿರ ರಾಜಪುತ್ರರಲಿ ।
ತೋಕುವಂಬಿನ ಜೋ[4]ದರೊಗ್ಗಿ[4]ನೊ
ಳೌಕಿದವು ಸಾವಿರ ಮದೇಭಾ
ನೀಕ ಬೊಬ್ಬೆಯ ಲಳಿಯಲೌಕಿತು ಲಕ್ಕ ಪಾಯದಳ ‖ ೨೮

ಸುರಿದುದಂಬಿನ ಸೋನೆ ರಥಿಕರ
ಕರಿಘಟೆಯ ಥಟ್ಟಿಂದ ಕಕ್ಕಡೆ
ಪರಶು ಶೂಲ ಮುಸುಂಡಿ ಸೆಲ್ಲೆಹ ಸಬಳ ಶಕ್ತಿಗಳು ।
ಅರಿಬಲಾಬ್ಧಿಯನೀಸಿದವು ತ
ತ್ತುರಗ ರಥವನು ಬೀಸಿದವು ಮದ
ಕರಿಗಳಿಕ್ಕಡಿಘಾಯಕೊಡಗಿತು ರಾಯರಾವುತರು ‖ ೨೯

---

[1] ಚಾಪವ (ಕ), ತನವನು (ಖ), ಷಣವನು (ಘ). [2] ಲೀ (ಘ.ತ), ಲಾ (ಖ.ದ). [3] ಗ್ಗೆ (ಕ.ಘ.ತ.ಪ). [4] ಡುಜೋಡಿ (ತ).

ನೆಱೆ ಪರಿಚ್ಛೇದಿಸಿದ ಬಲ ಮು
ಕ್ಕುಱಿಕಿತೋ ನಿಜಸೈನ್ಯಸಾಗರ
ಬಱಿತುದೋ ಬಲುಗೈಗಳೆದೆಗಳ ಕೆಚ್ಚು ಕರಗಿತಲಾ ।
ಮುಱಿದು ಬರುತಿದೆ ಸೃಂಜಯರು ಕೈ
ಮುಱಿದರೇ ಪಾಂಚಾಲಭಟರೆಂ
ದೊಱಲಿದುದು ಮಂತ್ರಿಗಳು ರಾಯನ ರಥದ ಬಳಸಿನಲಿ ॥ ೩೦

ಅರಸ ಕೇಳು ಯುಧಿಷ್ಠಿರನ ಮೇ
ಲುರವಣಿಸಿತೀ ಸೇನೆ ಭೀಮನ
ಬಿರುದ ತಡೆದವು ಸಾವಿರಾನೆಗಳೊಂದು ಬಾಹೆಯಲಿ ।
ಅರರೆ ರಾವುತೆನುತ್ತ ಕವಿದುದು
ತುರುಗ ಸಾವಿರ ನಕುಲ ಸಹದೇ
ವರಿಗೆ ಸಾತ್ಯಕಿಗಾಗಿ ಬಿಟ್ಟನು ರಥವನಾ ದ್ರೌಣಿ ॥ ೩೧

ರಾಯದಳದಲಿ ಚಾತುರಂಗದ
ಬೀಯ ಬೆದಱಿಸಿತದಟರನು ಬಲು
ನಾಯಕರಿಗಿದಿರೊಡ್ಡಿದರು ಕೃಪ ಭೋಜ ಗುರುಸುತರು ।
ಆಯಿತೀ ರಣವೆನುತ ಪಾಂಡವ
ರಾಯ ಹೊಕ್ಕನು ಬಳಿಕಲಾಕ
ರ್ಣಾಯತಾಸ್ತ್ರನು ಕಂಡನರ್ಜುನನಾ ಮಹಾದ್ಭುತವ ॥ ೩೨

ಮೇಲುಲೋಕವ ಬಯಸಿ ಕುರುಬಲ
ಮೇಲೆ ಬಿದ್ದುದು [1]ಜೀಯ ಜಡಿದು[1] ನೃ
ಪಾಲನೇಕಾಂಗದಲಿ ಹೊಕ್ಕನು ಹೊದಱಿನೊಡೆಬಡಿದು ।
ಮೇಲುದಾಯದಲವನಿಪನ ಸಂ
ಭಾಳಿಸುವೆನೆನೆ ನಗುತ ಲಕ್ಷ್ಮೀ
ಲೋಲ ಚಪ್ಪರಿಸಿದನು [2]ನರನುದ್ದಂಡವಾಜಿಗಳ[2] ॥ ೩೩

ಅರಸ ಕೇಳೈ ನಿಮಿಷದಲಿ ನೃಪ
ವರನ ರಥದಿಂ ಮುನ್ನ ಪಾರ್ಥನ
ತಿರುವಿನಬ್ಬರ ಕೇಳಲಾದುದು ಕಳನ ಚೌಕದಲಿ ।

1 ಧಾಪುರೆನುತ ಕ. 2 ನರನಾಟಕತುರಂಗಮವ (ಖ,ತ).

ಆರರೆ ದೊರೆಯೋ ಕೊಳ್ಳಿವನ ಕೈ
ಮಱೆಯದಿರಿ ಕುರುಧರಣಿಪನ ಹಗೆ
ಹಱಿಯಲೆಂದುರವಣಿಸಿ [1]ಕವಿದುದು ಕೂಡೆ ಕುರುಸೇನೆ[1] ॥ ೩೪

ಮೋಹಿದವು ಭರಿಕೈಗಳನು ರಥ
ವಾಪತತಿಗಾನೆಗಳು [2]ವಂಶ[2]
ದ್ರೋಹಿ ಸಿಲುಕಿದನೆನುತ ತಡೆದರು ರಥಿಕರೆಡಬಲನ ।
ಗಾಹಿಸಿತು ದೂಹತ್ತಿ ಲೌಡೆಯ
ರಾಹುತರು ಕಟ್ಟಳವಿಯಲಿ ಕವಿ
ದೋಹ[3]ಡಿ[3]ಸದೌಂಕಿತು ಪದಾತಿ ಧನಂಜಯನ ರಥವ ॥ ೩೫

ಏನನೆಂಬೆನು ಜೀಯ ಕುರುಬಲ
ದಾನೆಗಳ ವಿಕ್ರಮವನತಿರಥ
ರೇನ ನಿಲುವರು ಕೆಲಬಲನ ಚತುರಂಗದುಪಹತಿಗೆ ।
ಭಾನುಮಂಡಲವಕಟ ತಿಮಿರಾಂ
ಭೋನಿಧಿಯಲಕ್ಕಾಡಿತೆಂಬವೊ
ಲಾ ನಿರಂತರ ದೞದ [4]ಘ[4]ಟ್ಟಣೆ ಧೂಳಿಪಟವಾಯ್ತು ॥ ೩೬

ಮುಂ[5]ಕುಡಿ[5]ಯ ಹಿಡಿದಾನೆಗಳನೆಡ
ವಂಕಕೌಕಿದ ರಥಚಯವ ಬಲ
ವಂಕಕೊತ್ತಿದ ರಾವುತರನುಬ್ಬೆದ್ದ ಪಯದಳವ ।
[6]ಶಂಕೆ[6]ಯನು ನಾ ಕಾಣೆ[7]ಬಲನಡ[7]
ವಂಕವನು ತಱಿದೊಟ್ಟಿದನು ಮಾ
ಱಂಕ ನಿಲುವುದೆ ಪಾರ್ಥ ಮುನಿದಡೆ ಭೂಪ ಕೇಳೆಂದ ॥ ೩೭

ಉಡಿಯೆ ಮೋಱೆಯ ಜೋಡು ಜೋದರ
ಕೊಡಹಿ ಹಾಯ್ದುವು ದಂತಿಘಟೆ ಖುರ
ಕಡಿವಡಿಯೆ ಕುದುರೆಗಳು ಹಾಯ್ದುವು ಹಾಯ್ಕಿ ರಾವುತರ ।
ಮಡಿಯೆ ಸಾರಥಿ ಮಗ್ಗಿದವು ರಥ
ನಡೆದು ಕಾದಿ ಮಹಾರಥರು ಮಡಿ
ಗೆಡೆದುದುಳಿದ ಪದಾತಿ[8]ಪತನವ[8]ನಱಿಯೆ ನಾನೆಂದ ॥ ೩೮

---

[1] ಹೊಯ್ದುದು ರಿಪುಭಟವ್ರಾತ (ಕ). [2] ಕರ್ಣ (ಕ). [3] ರ (ಖ.ತ). [4] ಘು (ಕ). [5] ಕಣೆ (ಘ.ತ). [6] ಸಂಖ್ಯೆ (ಖ), ಶಂಬೆ (ಘ.ದ). [7] ನವರೆಡ (ಘ), ನದರೆಡ (ತ). [8] ಗಣನೆಯ (ಖ).

ಕರಿಘಟೆಗಳೈನೂಱು ರಥ ಸಾ
ವಿರದ ಮೂನೂಱೆರಡು ಸಾವಿರ
ತುರಗದಳವೆಂಬತ್ತು ಸಾವಿರ ವಿಗಡ ಪಾಯದಳ |
ತೆರಳೆ ತಂತಕಪುರಿಗೆ ಪುನರಪಿ
ತುರಗ ಸಾವಿರ ನೂಱು ರಥ ಮದ
ಕರಿಗಳಿನ್ನೂಱೆಂಟು ಸಾವಿರಗಣಿತ ಪಾಯದಳ ॥ ೩೯

ಮತ್ತೆ ಮೇಲೊಡಗವಿದ ನೂಱಱು
ವತ್ತು ಗಜ ರಥಯೂಥ ನೂಱಿ
ಪ್ಪತ್ತು ಮೂನೂಱಶ್ವಚಯ ಸಾವಿರದ ನಾನೂಱು |
ಪತ್ತಿ ಮ[1]ರ[1]ಳೈವತ್ತು ಗಜ ಮೂ
ವತ್ತು ಶರವಿನ್ನೂಱು ಹಯುವಱು
ವತ್ತು ನಾನೂಱಿಂದ ಮೇಲಾಯ್ತಳಿದ ಪಾಯದಳ ॥ ೪೦

ಬಿರುದುಪಾಡಿನ ಭಾಷೆಗಳ ನಿ
ಷ್ಠುರದ ನುಡಿಗಳ ರಾಜ[2]ವರ್ಗ[2]ದ
ಮರಳುದಲೆ[3]ಯನೆ[3] ಕಾಣೆನರ್ಜುನನೆನಾಹವಾಗ್ರದಲಿ |
ಹರಿವ ರಕುತದ ತಳಿತ ಖಂಡದ
ಶಿರದ ಹರಹಿನ ಕುಣಿವ ಮುಂಡದ
ಕರಿ ತುರಗ ಪಯದಳದ ಹೆಣಮಯವಾಯ್ತು ರಣಭೂಮಿ ॥ ೪೧

ಮುಱಿದುದೆಡಬಲವಂಕ ಪಾರ್ಥನ
ತಱುಬಿದನು ನಿನ್ನಾತ ಸೈರಿಸಿ
ಹಱಿದಳವ ಕೂಡಿದನು [4]ಕಲಿಮಾಡಿದನು ಕಾಲಾಳ[4] |
ಒಱಲಿದವು ಬಹುವಿಧದ ವಾದ್ಯದ
ಬಿಱುದನಿಗಳುಬ್ಬೆದ್ದು ಮಾರಿಯ
ಸೆಱಗ ಹಿಡಿದನು ಕೌರವೇಶ್ವರನರ್ಜುನನ ಕೆಣಕಿ ॥ ೪೨

ಕೊಲುವಡನುಚಿತವಿಂದು ಭೀಮಗೆ
ಕಳೆದ ಮೀಸಲು ನಿಮ್ಮ ತನು ನೀ
ಕೊಲಿದ ಪರಿಯಿಂದೆನು ವಿಭಾಡಿಸು ರಚಿಸು ಭಾಷೆಗಳ |

---

[1] ಗು (ಕ). [2] ಗರ್ವ (ಮು.ತ). [3] ಗಳ (ಖ,ಗ). [4] ಕೈಮಾಡಿದನು ಕಾತರಿಸಿ (ಕ).

ಆಳುಕದೆವು ನಿನಗೆಂದು ರಾಯನ
ಬಳಿಯ ಜೋದರ ರಾವುತರ ರಥಿ
ಗಳ ಪದಾತಿಯನಿಕ್ಕಿದನು ಸೆಕ್ಕಿದನು ಸರಳುಗಳ ॥ ೪೩

ಜನಪ ಕೇಳೈ ನಿನ್ನ ಮಗನ
ರ್ಜುನನನೆಚ್ಚನು ಫಲುಗುಣಾಸ್ತ್ರವ
ಟನಕಡಿದು ಮಗುಳೆಚ್ಚು ಪಾರ್ಥನೊಳೇಱ ತೋಱಿಸಿದ ।
ಮನದ ಮದ ಮೀಱಿತು ಕಿರೀಟಿಯ
ಮೊನೆಗಣೆಯ ಮನ್ನಿಸದೆ ದುರ್ಯೋ
ಧನನು ದುವ್ವಾಳಿಸಿದನವನೀಪತಿಯ ಮೋಹರಕೆ ॥ ೪೪

ಅರಸುಮೋಹರ ಸಿಲುಕಿದುದು ದೊರೆ
ಬೆರಸಿ ಹೊಯ್ದನು ಬೇಹ ಸುಭಟರು
ಮರಳಿಯೆನೆ ಮುಂಚಿದರು ಪಂಚದ್ರೌಪದೀಸುತರು ।
ಧರಣಿಪತಿಯ ವಿಘಾತಿಗೊಪ್ಪಿಸಿ
ಶಿರವನೆನುತುಬ್ಬೆದ್ದು ಪಾಂಚಾ
ಲರು ಪ್ರಬುದ್ಧಕ ಸೃಂಜಯರು ರಂಜಿಸಿತು ಚೂಣಿಯಲಿ ॥ ೪೫

ಇತ್ತ ಪಡಿಬಲವಾಗಿ ಸಾವಿರ
ಮತ್ತಗಜಘಟೆ ಕೌರವೇಂದ್ರನ
ತೆತ್ತಿಗರು ತೂಳಿದರು ಪಾಂಚಾಲಪ್ರಬುದ್ಧಕರ ।
ಹತ್ತು ಸಾವಿರ ಪಾಯದಳ ಹೊಗ
ರೆತ್ತಿದಲಗಿನ ಹೊಳಹಿನಂತಿರೆ
ಮುತ್ತಿತವನೀಪತಿಯ ಮೋಹರದೆರಡು ಬಾಹೆಯಲಿ ॥ ೪೬

ನೂಱು ರಥದಲಿ ಬಲುಗುದುರೆ ನಾ
ನೂಱಱಲಿ ಕುರುರಾಯ ಸೂಠಿಯ
ಲೇಱಿದನು ಧರ್ಮಜನ ದಳ ನುಗ್ಗಾಯ್ತು ನಿಮಿಷದಲಿ ।
ಮೀಱಿದವು ಗಜಘಟೆಗಳಾವೆಡೆ
ತೋಱು ದೊರೆಗಳನೆನುತ ಬೊಬ್ಬಿಱಿ
ದೇಱು[1]ಸಿದರರಿಭಟರು ನೃಪತಿಗೆ ಜೋದರಂಬುಗಳ[1] ॥ ೪೭

---

[1] ಪಾಠ: ಭೂಪತಿಯ ಜೋದರು ಕಟ್ಟಿದಂಬುಗಳ (ಕ).

ಏನು ಹೇಳುವೆನವನಿಪತಿ ಯಮ
ಸೂನುವಿನ [1]ಸುಕ್ಷಾತ್ರವನು[1] ನಿ
ನ್ನಾನೆಗಳನಗ್ಗಳೆಯ ರಾವ್ತರ ರಥಪದಾತಿಗಳ |
ಭಾನುಬಿಂಬವ [2]ತಗೆವ[2] ತಮದ ವಿ
ತಾನದಂತಿರೆ [3]ವಿರಸವಾಯ್ತು ಶ
ರಾನುಗತಶರಜಾಲ ಜನದ ವಿಡಾಯ್ಲತನವೆಂದ[3] ॥ ೪೮

ಆಳ ಕೊಂದನು ನೂಱ ಪುನರಪಿ
ಸೀಳಿದನು ಮೂನೂಱುಸುಕ್ಕಿನ
ಬೋಳೆಯಂಬಿಗೆ ಬೀಱಿದನು ನಾಲ್ಕೈದು ಸಾವಿರವ |
ಮೇಲೆಮೂಸಾವಿರದ [4]ಸ[4]ವಡಿಯ
ಸೀಳಿಸಿದನಿನ್ನೂಱು ಕುದುರೆಗೆ
ಕಾಲನೂರಲಿ ಲಾಯ ನೀಡಿತು ನೃಪತಿ ಕೇಳೆಂದ ॥ ೪೯

ಚೆಲ್ಲಿದವು ರಥ ಗಾಲಿ ಮುಱಿದವು
[5]ಗೆ[5]ಲ್ಲಿಗೆಡೆದವು ಕೊಡೆ ಕಂಬುಗೆ
ಯಲ್ಲಿ ಕಾಣೆನು ಕೊಬ್ಬಿದಚ್ಚಿನ ಕಡಿದ ಕೀಲುಗಳ |
ಎಲ್ಲಿಯವು ರಥವಾಜಿ ವಾಜಿ[6]ಗೆ
ತೆಲ್ಲಟಿ[6]ಯಲೇ ರಥಿಕ [7]ಸೂತರು[7]
ಬಲ್ಲದರು ಕುರುಳಿಂಗೆ ಹಾಯ್ದರು ಸುರರ ಸೂಳೆಯರ ॥ ೫೦

[8]ಉಳಿಗಡಿಯ[8] ನಾನೂಱು ಕುದುರೆಗ
ಳಳಿದವರಸನ ಶರಹತಿಗೆ ಮು
ಮ್ಮುಳಿತವಾದುದು ಹತ್ತು ಸಾವಿರ ವಿಗಡ ಪಾಯದಳ |
ಕಳಚಿ ಕೆಡೆದವು ನೂಱು ರಥ ವೆ
ಗ್ಗಳೆಯುತನವರಿರಾಯುರಲಿ ಹೆ
ಕ್ಕಳಸಿ ಕಳವಳಿಸಿದನು ಕೌರವರಾಯ ಖಾತಿಯಲಿ ॥ ೫೧

ಜೋಡಿಸಿದ ಸಾವಿರ ಗಜಂಗಳ
ನೀಡಿಱಿದರಂಕುಶದಿ ನೆತ್ತಿಯ
ತೋಡಿಬಿಟ್ಟರು ನೃಪನ ಪಾತದಲಿ ದೊರೆಯ ಸಮ್ಮುಖಕೆ |

---

[1] ಸಾಮರ್ಥ್ಯವನು (ಕ), ಕೈ ಚಳಕವನು (ತ). [2] ತಗುಳ್ವ (ಕ.ಘ). [3] ಕವಿದ ಕೌರವಸೇನೆಯನು ಶರಜಾಲದಲ ಹರೆಗಡಿದನವನೀಶ (ಕ). [4] ಸಿ (ಕ). [5] ಗ (ಕ). [6] ಯಕೆಲ್ಲಡೆ (ಟ.ದ). [7] ರಸುಕ್ಕೈ (ಕ.ಟ.ದ). [8] ಅಳಿದಗಜ (ಕ).

ಜೋಡಿಸಿದ ಭರಿಕಯ್ಯ ಪರಿಘದ
ಲೌಡಿಗಳ ಪಟ್ಟೆಯ[1]ದಲೊಬ್ಬುಳಿ
ಗೂಡಿ[1] ತೂಳಿದವಾನೆಗಳು ಯಮಸುತನ ಪಡಿಮುಖಕೆ॥ ೫೨

ಎಲೆಲೆ ಭೂಪತಿ ಸಿಕ್ಕಿದನು ಗಜ
ಬಲದ ಭಾರಣೆ ಬಲುಹೆನುತ ಬಲ
ಕಳವಳಿಸೆ ಕೇಳಿದನಲೈ ಕಲಿಭೀಮನಾಚೆಯಲಿ।
ಪ್ರಳಯದಿವಸದ [2]ಶಿಖಿಯ[2] ಡಾವರ
ದೊಳಗೆ ಶ್ರಮವಮಾಡಿದನೆನಲು ಮಿಗೆ
ಮೊಳಗಿ ಮುಂಡಿಯನಿಕ್ಕಿ ಮಲೆತನು ಸಿಂಹನಾದದಲಿ॥* ೫೩

ಚೆಲ್ಲಿದವು ಗಜಯೂಥವಪ್ರತಿ
ಮಲ್ಲ ಭೀಮನ ಗದೆಯ ಘಾತಿಯ
ಘಲ್ಲಣಿಗೆ ಕಂಠಣಿಸಿದವು ಟೆಂಠಣಿಸುವಾನೆಗಳು।
ಸೆಲ್ಲೆಹದ ಮಳೆಗಱೆದು [3]ಭೀಮನ
ಘಲ್ಲಿಸಿದರಾರೋಹಕರು ಬಲು[3]
ಬಿಲ್ಲ ಜಂತ್ರದ ನಾಳಿಯಂಬಿನ ಸರಳ ಸಾರದಲಿ॥ ೫೪

ಜನಪ ಕೇಳೈ ಜಡಿವ ತುಂತು
ರ್ವನಿಗಳನು ಬಿಱುಗಾಳಿ ಮೊಗೆವವೊ
ಲನಿತು ಸೆಲ್ಲೆಹ ಶರವಳೆಯು ಗದೆಯಿಂದ [4]ಘಟ್ಟಿಸಿದ[4]।
ಜಿನುಗುವಳೆಯಲಿ ಪರ್ವತದ ಶಿಲೆ
ನೆನೆವುದೇ ಗಜಸೇನೆ ಕದಳೀ
ವನವಲೇ ಕಲಿಭೀಮದಿಗ್ಗಜ ಗಾಢ ಪದಹತಿಗೆ॥ ೫೫

ಅವನಿಪನ ಹಿಂದಿಕ್ಕಿ ಗಜಯೂ
ಥವ ವಿಭಾಡಿಸಿ ಹಿಂಡ ಕೆದಱಿದ
ನವಗಡಿಸಿದನು ಹಾಟಿಲೂದಿದನೊದೆದು ಬೊಬ್ಬಿಱಿದ।

---

[1] ವನೊಬ್ಬುಳಿಗೂಡಿ (ಘ.ತ.ಪ), ದ ಬೊಬ್ಬುಳಿಮಾಡಿ (ಟ.ದ). [2] ಸಿಡಿಲ (ಕ). * ಈ ಪದ್ಯವು (ಘ) ಪ್ರತಿಯಲ್ಲಿಲ್ಲ. [3] ಜೋಡಿನ ಝುಲ್ಲರಿಗಳಲಿ ತುರುಗಿದರ್ು ಜೋದರ (ಖ.ಘ.ತ.ಪ), ಝೂಡಿಯ ಝುಲ್ಲರಿಯ ತುರುಗಿದದು ಗಗನಕೆ ಬಲು (ಟ.ದ). [4] ಖಂಡಿಸಿದ (ಖ.ಘ.ತ).

ತಿವಿದನಣಸಿನಲೂಱಿ ವೊನೆಯುಲಿ
ಸವಡಿಯಾನೆಯನೆತ್ತಿದನು ಬಲ
ಬವರಿಯೆಡಬವರಿಯಲಿ ತತೆಗಾಶ್ವೊಯ್ದನಾ ಭೀಮ ॥ ೫೬

ಒಱಲ ತಿವಿದನು ಕರಿಯ ಬರಿಯೆಲು
ಮುಱಿಯಲೊದೆದನು ಸದೆದು ದಾಡೆಯ
ತಿಱುಹಿ ಕಿತ್ತನು ಬಿಕ್ಕದನು [1]ಬಿದುವಿ[1]ನಲಿ ಬಲುಗದೆಯ ।
ಜಱಿದನಾರೋಹಕರ ತಲೆಗಳ
ತಱಿದು ಬಿಸುಟನು ಗಜಘಟೆಯ ಥ
ಟ್ಟೊಱಗಿದವು [2]ದ[2]ಡಿಸಹಿತ ನವರುಧಿರಾಂಬುಪೂರದಲಿ ॥ ೫೭

ಗುಳವನುಗಿ[3]ದಾರೋಹಕರ[3] ಮುಂ
ದಲೆಯ ಸೆಳೆದೊಡಮೆಟ್ಟಿದನು ಮುಂ
ಡಳಿಸಿದೊಡ್ಡಿನ ಮೇಲೆ ಹಾಯ್ದನು ಹೊಯ್ದನುರವಣಿಸಿ ।
ಕಳಚಿದನು ದಾಡೆಗಳ ಭರಿಕ್ಕೈ
ಗಳನು ತುಂಡಿಸಿ [4]ವಾಲಧಿಯ ಬರ[4]
ಸೆಳೆದು ಕೊಡಹಿದನಾನೆಗಳ ನಾನಾವಿಧಾನದಲಿ ॥ ೫೮

ಕೋಡ ಕಿತ್ತನು ನೂಱು ಗಜವ ವಿ
ಧಾಡಿಸಿದನಿನ್ನೂಱನಡಹಾ
ಯ್ದೋಡಿದವು ನೂಱಾನೆ ಭೀಮನ ಗದೆಯ ಗಾಳಿಯಲಿ ।
ಜೋಡಿಗೆಡೆದವು ನೂಱು ಮಗ್ಗುಲ
ನೀಡಿದವು ನಾನೂಱು ಪುನರಪಿ
ಕೇಡುಗಂಡವು ನೂಱು ಭೀಮನ ಗದೆಯ ಘಾಯದಲಿ ॥* ೫೯

ಧರಣಿಪತಿ ಕೇಳ್ ಭೀಮಸೇನನ
ಧರಧುರದ ದೆಖ್ಖಾಳದಲಿ ನ
ವ್ಮರಸ ನಿಂದನು ಕಾದಿದನು ನೂಱಾನೆಯಲಿ ಮಲೆತು ।
ಸರಳ ಸಾರದಲನಿಲಜನ ರಥ
ತುರಗವನು ಸಾರಥಿಯನಾತನ
ಭರವಸವ ನಿಲಿಸಿದನು ನಿಮಿಷಾರ್ಧದಲಿ ಕುರುರಾಯ ॥ ೬೦

---

[1] ಮಿದುಳಿ (ಖ), ನಡುವಿ (ತ). [2] ತ (ಕ.ಖ.ಟ.ದ). [3] ದನು ಮಾವುತರ (ಠ). [4] ಚಾಲಪತ್ರವ (ಖ), ವಾಮಹಸ್ತದಿ (ಘ.ತ), ಕಾಲುಗಳಱ (ಟ.ಡ), ತೋರಹತ್ತರ (ಪ). * ಈ ಪದ್ಯವು (ಖ) ಪ್ರತಿಯಲ್ಲಿಲ್ಲ.

ಒಡೆದು ರಥವನು ಧರೆಗೆ ಧುಮ್ಮಿ
ಕ್ಕಿದನು ಕೌರವರಾಯ ಮೈದೋ
ಱಿದೆಯಲಾ ಕಲಿಯಾಗು ಪಾಲಿಸದಿರು ಪಲಾಯನವ।
ರದನಿಗಳ ರೌದ್ರಾಹವಕೆ ಕೋ
ವಿದವಲೇ ಕೊಳ್ಳೆನುತ ಕರಿಗಳ
ಕೆದಱಿದನು ಕಲಿಜೋದರಂಬಿನ ಸರಿಯ ಸೈರಿಸುತ॥ ೬೧

ಏನ ಹೇಳುವೆನವನಿಪನ ಮದ
ದಾನೆ ಮುಱಿದವು ಭೀಮಸೇನನೊ
ವೈನತೇಯನೊ ಕರಿಗಳೋ ಕಾಳೋರಗನ ದಳವೋ।
ಮಾನನಿಧಿ ಮುಱಿವಡೆದನೈ ವೈ
ರಾನುಬಂಧದ ಬೇಗುದಿಯ ದು
ಮ್ಮಾನ ದಳವೇಱಿದುದು [1]ಹೇಱಿತು ಭೀತಿ ಭೂಪತಿಗೆ[1]॥ ೬೨

ನೂಱು ಗಜವಕ್ಕಾಡಲವನಿಪ
ನೇಱಿದನು ವಾರುವನನೆಡದಲಿ
ಜಾಱಿದನು ಸೂಠಿಯಲಿ ದುವ್ವಾಳಿಸಿ ತುರಂಗಮವ।
ಆಱು ಸಾವಿರ ಕುದುರೆ ರಥವೈ
ನೂಱುಗಜಘಟೆ ನೂಱುಮೂವ
ತ್ತಾಱು ಸಾವಿರ ಪಾಯದಳದಲಿ ಬಂದನಾ ಶಕುನಿ॥ ೬೩

ಶಕುನಿ ಕಂಡನು ಕೌರವೇಂದ್ರನ
ನಕಟ ನೀನೇಕಾಂಗದಲಿ[2]ಹೋ
ರಿಕೆಗೆ[2] ಬಂದೈ ಗರುವ ಗುರುಸುತ ಭೋಜ ಗೌತಮರು।
ಸಕಲಬಲ ನುಗ್ಗಾಯ್ತು ಸಮಸ
ಪ್ತಕರು ನಿನ್ನಯ ಮೂಲಬಲವಿದೆ
ವಿಕಳನಾಗದಿರೆಂದು ಸಂತೈಸಿದನು ಕುರುಪತಿಯ॥ ೬೪

ದಳಪತಿ[3]ಯು[3] ಪವಡಿಸಿದನರಸನ
ಸುಳಿವು ಸಿಲುಕಿ[4]ತು ಭಯದ ಬಲೆಯಲಿ[4]
ಮೊಳಗುತದೆ ನಿಸ್ಸಾಳ ಸುಮ್ಮಾನದಲಿ ರಿಪುಬಲದ।

---

[1] ಹಾರಿತು ವಾಸಿ ಭೂಪತಿಯ (ಟ.ದ). [2] ಹೋಲಿಕೆಗೆ (ಖ), ವಾರುವಕೆ (ಘ), ಬಾಳಿಕೆಗೆ (ಟ.ದ.ಪ), ವಾಪಕಕೆ (ತ). [3] ಯೆ (ಖ). [4] ತರಾತಿಬಲದಲಿ (ಖ), ತ್ತುಭಯಬಲದಲಿ (ತ), ತ್ತುವೈರಿಬಲದಲಿ (ಪ).

ಉಳಿದರೋ ಗುರುಸೂನು ಕೃಪರೇ
ನಳಿದರೋ ಪಾಳೆಯದೊಳಗೆ ರಥ
ವಿಳಿದರೋ ತಾನೇನೆನುತ ಚಿಂತಿಸಿತು ಕುರುಸೇನೆ॥ ೬೫

ಕೂಡೆ ಹಱಿಹಂಚಾದ ಸುಭಟರು
ಕೂಡಿಕೊಂಡುದು ನೊಂದು ನಸಿದವ
ರೋಡಿದವರೊಗ್ಗಾಯ್ತು ಕುರುರಾಯನ ಪರೋಕ್ಷದಲಿ।
ನೋಡಲಹುದಾಹವದೊಳಗೆ ಕೈ
ಮಾಡಿ*[1]ಸಿದ[1] ವಸುಧಾಂಗನೆಗೆ ಬೆಲೆ
ಮಾ*ಡುವುದು ಮತವೆಂದು ಕವಿದುದು ಮತ್ತೆ ಕುರುಸೇನೆ॥ ೬೬

ಬಿಡದಲಾ ಕುರುಸೈನ್ಯ ಹಕ್ಕಲು
ಗೆಡಿಯ ಭಟರೊಗ್ಗಾಯ್ತಲಾ ದೊರೆ
ಮಡಿದನೋ ಬಳಲಿದನೊ ಮಿಗೆ ಪೂರಾಯಘಾಯದಲಿ।
ಪಡೆಯ ಜಂಜಡ ನಿಲಲಿ ಕೌರವ
ರೊಡೆಯನಾವೆಡೆ ನೋಡು ನೋಡೆಂ
ದೊಡನೊಡನೆ ಪವಮಾನಸುತನಱಸಿದನು ಕುರುಪತಿಯ॥ ೬೭

ಅರಸ ಕೇಳ್ಕೈ ಕೌರವೇಂದ್ರನ
ನೆಱಸುತರ್ಜುನ ಭೀಮ ಸಾತ್ಯಕಿ
ಧರಣಿಪತಿ ಸಹದೇವ ನಕುಲರು ಕೂಡೆ ಕಳನೊಳಗೆ।
ತಿರುಗಿದರು ಬಳಿಕಿತ್ತಲೀ ಮೋ
ಹರವ ಧೃಷ್ಟದ್ಯುಮ್ನ ಸೃಂಜಯ
ರೊರಸಿದರು ನಿಶ್ಶೇಷ ಕೌರವನೃಪಚತುರ್ಬಲವ॥ ೬೮

ಧರಣಿಪತಿ ಕೇಳಿನ್ನು ಮೇಲಣ
ಧುರದ ವೃತ್ತಾಂತವನು ಕುರುಪತಿ
ಯಿರವನಱಿಯೆನು ಕಂಡುಬಹೆನೇ ನೇಮವೇ ತನಗೆ।
ಗುರುಸುತನು ಕೃಪ ಭೋಜ [2]ಶಕುನಿಗ
ಳ[2]ರಸನನು ಪರಿವೇಷ್ಟಿಸಿದರರ
ನಱಿದು ಬಹೆನೆನೆ ಕಳುಹಿದನು ಧೃತರಾಷ್ಟ್ರ ಸಂಜಯನ॥ ೬೯

ಮೊದಲನೆಯ ಸಂಧಿ ಮುಗಿದುದು.

---

[1]ದಡೆ (ಕ.ಖ). *—* ದವರಮರಾಂಗನೆಯರೊಡಗೂ (ಚ.ದ). [2] ಗೌತ
ಮರ (ಘ.ತ).

# ಎರಡನೆಯ ಸಂಧಿ

---

**ಸೂಚನೆ॥** ಸಕಲಬಲ ನುಗ್ಗಾಯ್ತು [1]ಸಮಸ[1]
ಪ್ತಕರು ಮಾಡಿದರು ಪಾರ್ಥಶರದಲಿ
ಶಕುನಿಯನು ಸಂಗ್ರಾಮದಲಿ ಸೀಳಿದನು ಸಹದೇವ॥

ಕೇಳು ಜನಮೇಜಯ ಧರಿತ್ರೀ
ಪಾಲ ಸಂಜಯ ಬಂದು ಕುರುಭೂ
ಪಾಲಕನನಱಿಸಿದನು ಸಂಗರರಂಗಭೂಮಿಯಲಿ।
ಮೇಲುಸುಯೋಧಾನದ ತುರಂಗಮ
ಜಾಲ ಸಹಿತಗಲದಲಿ ಕುರುಭೂ
ಪಾಲನಾವೆಡೆಯೆನುತ ಬೆಸಗೊಳುತಱಿಸಿದನು ನೃಪನ॥ ೧

ವಂದಿಗಳ ನಿಸ್ಸಾಳಬಡಿಕರ
ಮಂದಿ ಹಡಪಿಗ ಚಾಹಿ ಸೂತರ
ಸಂದಣಿ[2]ಗಳೌಷಧಿಕ ಹಯಗಜಸಂವಿಧಾಯಕರು[2]।
ನಿಂದು[3]ದದು[3] ಸಂಖ್ಯಾತವಿನಿಬರ
ನಂದು ಸಂಜಯ ಕರೆದು ಕೇಳಿದ
ನಿಂದುಕುಲಸಂಭವನ ಕಂಡಿರೆ ಕೌರವೇಶ್ವರನ ॥ ೨

ಕೂಡೆ ಸಂಜಯನಱಿಸಿದನು [4]ನಡೆ
ಜೋಡಿನವು[4] ನಾನೂಱು ಕುದುರೆಯ
ಕೂಡಿ ಕೌರವನೃಪನ ಕಾಣದೆ ಕಳನ ಚೌಕದಲಿ।
ನೋಡುತಿರೆ ಸಾತ್ಯಕಿ ಚತುರ್ಬಲ
ಗೂಡಿ ಕವಿದನು ಹಯಬಲವ ಹುಡಿ
ಮಾಡಿದನು ನಾನೂಱ ಕೊಂದನು ಸರಳ ಸಾರದಲಿ॥ ೩

---

[1] ಸಂಶ (ಖ), ಶಂಸ (ಟ.ದ). [2] ಯರಥನಿಕರ ಗಜಹಯಸಂನಿಧಾನದಲ (ಖ), ಗಳಾಗಜಹಯಾವಳಿ ಸಂವಿಧಾಯಕರ (ಟ.ದ). [3] ದಿದ (ಫ). [4] ಬಿಡೆ ಜೋಡಿನವ (ಫ.ತ), ಪಯಪಾಡಿನಲಿ (ಟ.ದ).

ಹಿಡಿದು ಸಂಜಯನನು ವಿಭಾಡಿಸಿ
ಕೆಡಹಿದನು ಬಲುರಾವುತರನವ
ಗಡವ ಕೇಳಿದು ದ್ರೋಣಸುತ ಕೃತವರ್ಮ ಗೌತಮರು।
ಫಡಫಡೆಲವೋ ಸಂಜಯನ ಬಿಡು
ಬಿಡು ಮದೀಯ ಮಹಾಶರಕೆ ತಲೆ
ಗೊಡುವಡಿದಿರಾಗೆನುತ ತಱುಬಿದರಿವರು ಸಾತ್ಯಕಿಯ॥ ೪

ದ್ರೋಣಸುತ ಕುರುಪತಿಯ [1]ಸಮರಕೆ[1]
ಹೂಣಿಗ[2]ನಲೇ ಬಲ್ಲೆವಿದಱಲಿ[2]
ಬಾಣವಿದ್ಯೆಯ ಬೀಱು ಬಿಡಿಸುವರಿವರು ಸಂಜಯನ।
ಕಾಣಲಹುದಂತಿರಲಿ ನಿಮಗೀ
ಕೇಣದಲಿ ಫಲವಿಲ್ಲ ಕೃಪ ತ
ನ್ನಾಣೆ ನೀ ಮರುಳೆಂದು ಸಾತ್ಯಕಿ ಸುರಿದನಂಬುಗಳ॥ ೫

ಕೋಡಕಯ್ಯಲಿ ತಿರುಗಿ ಕೃಪ ಕೈ
ಮಾಡಿದನು ಕೃತವರ್ಮನೆಸುಗೆಯ
[3]ತೋಡುಬೀಡಿನ[3] ಭರವ ಬಲ್ಲವನಾರು ಸಮರದಲಿ।
ನೋಡಲೀತನ ಗರುಡಿಯಲಿ ಶ್ರವ
ಮಾಡಿದವರೇ ಮೂಱು ಜಗವ ವಿ
ಭಾಡಿಸುವ[4]ರೆನೆ[4] ಹೊಗಳ್ವನಾವನು ದ್ರೋಣನಂದನನ॥ ೬

ಎಚ್ಚನಶ್ವತ್ಥಾಮನಾ ಕೃಪ
ನೆಚ್ಚನಾ ಕೃತವರ್ಮಕನು ಕವಿ
ದೆಚ್ಚನೀ ಶರಜಾಲ ಜಡಿದವು ಕಿಡಿಯ ಗಡಣದಲಿ।
ಬೆಚ್ಚಿದನೆ ಬೆದಱಿದನೆ ಕೈಕೊಂ
ಡೆಚ್ಚು ಸಾತ್ಯಕಿ ರಿಪುಶರಾಳಿಯ
ಕೊಚ್ಚಿದನು ಕೊಡಹಿದನು ಮಿಗೆ ಭಂಗಿಸಿ ವಿಭಾಡಿಸಿದ॥ ೭

ಎಲೆಲೆ ಸಾತ್ಯಕಿಗಾಹವದ [5]ಧು[5]ರ
ಬಲುಹೆನಲು ಸೃಂಜಯರು ಸೋಮಕ
ಬಲ ಶಿಖಂಡಿ ದ್ರುಪದನಂದನ ಪಾಂಡವಾತ್ಮಜರು।

---

1 ಕದನಕೆ (ಖ.ಫ.ತ). 2 ಗರು ಕೃತವರ್ಮಕರು ನೆರೆ (ಖ.ಗ.ಟ). 3 ಹೂಡಿ ಬಿಡುವೀ (ಕ). 4 ರೈ (ಕ). 5 ಥ (ಕ).

ಚಳಪತಾಕೆಯ ವಿವಿಧವಾದ್ಯದ
ಕಳಕಳದ ಕೈದುಗಳ ಹೊಳಹಿನ
ತಳಪ ಝಳಪಿಸೆ[1]ಜೋಡಿ[1]ಸಿತು ಸಾತ್ಯಕಿಯ ಬಳಸಿನಲಿ॥ ೮

ಹಱಿಯದಿಲ್ಲಿಯು ಬವರ ರಾಯನ
ನಱಸಬೇಹುದು ಕುರುಪತಿಯ ಮುಂ
ದಿಱಿದು ಮೆಱೆವುದು ಕೀರ್ತಿ ನಿಷ್ಫಲವಿಲ್ಲ ಶರರಚನೆ।
ಅಱಿವೆವೀ ಸಾತ್ಯಕಿಯು ಸಮರದ
ಮುಱುಕವನು ಬಳಿಕೆನುತ ಕೌರವ
ನಱಿಕೆಯಲಿ ತಿರುಗಿದರು ಕೃಪ ಕೃತವರ್ಮ [2]ಗುರುಸುತರು[2]॥ ೯

ತೆರಳಿದರು ಗುರುನಂದನಾದಿಗ
ಳರಿನೃಪಾಲನ ಕಾಣೆವಾತನ
ನಱಸಬೇಹುದು ಶಕುನಿ ದುರ್ಯೋಧನ ಸುಶರ್ಮಕರು।
ದೊರೆಗಳಿದು ಪರಿ[3]ಶಿಷ್ಟರುಪ[3]ಸಂ
ಹರಣವೇ ಕರ್ತವ್ಯವಿದು [4]ದು
ಸ್ತರಣಶ್ರಮ[4]ಫಲವೆಂದು ನುಡಿದನು ಧರ್ಮಸುತ ನಗುತ॥ ೧೦

ಮಸಗಿದುದು ಪರಿವಾರ ಕೌರವ
ವಸುಮತೀಶ್ವರನಱಿಕೆಯಲಿ ದಳ
ಪಸರಿಸಿತು [5]ಬಿಡದಱಸಿ[5] ಕಂಡರು ಕಳನ ಮೂಲೆಯಲಿ।
ಮಿಸುಪ ಸಿಂಧದ ಸೀಗುರಿಯ ಝಳ
ಪಿಸುವಡಾಯ್ದ ಸಿತಾತಪತ್ರ
ಪ್ರಸರದಲಿ ಹೊಳೆಹೊಳೆವ ಶಕುನಿಯ ಬಹಳ ಮೋಹರವ॥ (೧೧ )

ಅದೆ ಸುಯೋಧನನೊಡ್ಡು ನಸುದೂ
ರದಲಿ ಕವಿಕವಿಯೆನುತ ಧಾಳಿ
ಟ್ಟುದು ಚತುರ್ಬಲ ಭೀಮಪಾರ್ಥರ ರಥದ ಚೂಣಿಯಲಿ।
ಹೊದಱು ಹಳಚಿತು ಭಟರು ಭುಜಗ
ರ್ವದಲಿ ಗರುವರ ಗಾಢ ಶೌರ್ಯದ
ಮದಕೆ ಮಡಮುರಿಯಾಯ್ತು ಸಿಲುಕಿತು ಮಾನ ಮೋನದಲಿ॥ ೧೨

---

[1] ರೊಂಪಿ (ಘ.ತ). [2] ಗೌತಮರು (ಘ.ತ). [3] ವೇಷ್ಟಿಸಿತು (ಬ), ವೇಷವುಪ (ಕ), ಶೇಷದುಪ (ಟ.ದ.) [4] ದುಶ್ಚರಣಶ್ರಮ (ಕ), ದುಷ್ಕೃತದಸವು (ಘ). [5] ಬಲವೆರಸಿ (ಬ), ಬಂಡಿವರು (ತ).

ಹೆಗಲ ಹಿರಿಯುಬ್ಬಣದ ಕೈತಳ
ಮಗುಚಲಮ್ಮದಾ ಮಾಘೆಯಲಿ ಕೈ
ಬಿಗಿದುದಂಕಣಿದೊಡಕಿನಲಿ ಮರನಾದವಂಘ್ರಿಗಳು।
ಬಗೆಯ ಮಾಡಿ ಮಸಳಿಸಿತು [1]ವೀರಕೆ[1]
ಬೆಗಡು ಹುದುವನೆಯಾಯ್ತು [2]ಕೈ[2]ನಂ
ಬುಗೆಗೆ ಮರಳಿದರೊಬ್ಬರೊಬ್ಬರು ರಾಯರಾವೃತರು॥ ೧೩

ಬಂದುದಾ ಮೋಹರ ಸಘಾಡದಿ
ನಿಂದುದೀ ಬಲ ಸೂಠಿಯಲಿ ಹಯ
ವೃಂದ ಬಿಟ್ಟವು ತೂಳಿದವು ಹೇರಾನೆ ಸರಿಸದಲಿ।
ನೊಂದುದಾಚೆಯ ಭಟರು ಘಾಯದೊ
ಳೊಂದಿತೀಚೆಯ ವೀರರುಭಯದ
ಮಂದಿ ಬಿದ್ದುದು ಚೂಣಿಯದ್ದುದು ರುಧಿರಜಲಧಿಯಲಿ॥ ೧೪

ಜಾಱಿದನೆ ಕುರುಪತಿಯಕಟ ಮೈ
ದೋಱನೇ ನಮಗೂರುಗಳ ಕೊಡ
ಲಾಱದೇ ಕಾಳೆಗವ ಕೊಟ್ಟನು ಮತ್ತೆ ಕೊಂಡನಲಾ।
ತೋಱಿಸನೆ ಖಂಡೆಯದ ಸಿರಿ ಮೈ
ದೋಱಹೇಳೋ ಕರೆಯೆನುತ ತಲೆ
ದೋಱಿದರು ಭೀಮಾರ್ಜುನರು ಸೌಬಲನ ಥಟ್ಟಿನಲಿ ॥ ೧೫

ಘಡಘಡೆಲವೋ ಪಾರ್ಥ ಕುರುಪತಿ
ಯಡಗುವನೆ ನಿನ್ನಡಗ ತಱಿದುಣ
ಬಡಿಸನೇ ವೇತಾಳರಿಗೆ ವೈತಾಳಿಕನೆ ನೀನು।
ಗಡಬಡಿಸಿ ಪರರುನ್ನತಿಯ ಕೆಡೆ
ನುಡಿದು ಫಲವೇನೆನುತ ಪಾರ್ಥನ
ತಡೆದನಂದು ಸುಶರ್ಮ ಸಮಸಪ್ತಕರ ದಳ ಸಹಿತ॥ ೧೬

ಮುತ್ತಿದವು ರಥವೇಳನೂಱಱು
ಪತ್ತು ಹಯವೈನೂಱು ಸಾವಿರ
ಮತ್ತಗಜವಿಪ್ಪತ್ತು ಸಾವಿರ ಪಾಯದಳ ಸಹಿತ।

[1] ಬೆಂಕೆಯ (ಕ), ಚಿತ್ತಕೆ (ಪ). [2] ಮನ (ಗ,ಚ,ದ), ಮೈ (ಘ,ತ).

ತೆತ್ತಿಸಿದವೆಂಬುರವಣಿಸಿ ದೂ
ಹತ್ತಿ ಹೊಳೆದವು [1]ಸಮರದಲಿ ಮುಖ
ಕೆತ್ತುದೆನೆ[1] ಕೈದುಗಳ [2]ಮಯ[2] ವೇಢೈಸಿತರ್ಜುನನ॥ ೧೭

ಶಕುನಿ ಸಹದೇವನನುಳೂಕನು
ನಕುಲನನು ಕುರುರಾಯನನುಜರು
ಚಕಿತ ಚಾಪನ ಕೆಣಕಿದರು ಪವಮಾನನಂದನನ।
ಅಕಟ ಫಲುಗುಣ ಎನುತ ಸಮಸ
ಪ್ತಕರು ಕವಿದರು ನೂಱು ಗಜವಲಿ
ಸಕಲದಳಕೊತ್ತಾಗಿ ನಿಂದನು ಕೌರವರರಾಯ॥ ೧೮

ಏಱಿದರು ಸಮಸಪ್ತಕರು ಕೈ
ದೋಱಿದರು ಫಲುಗುಣನ ಜೋಡಿನೊ
ಳೇಱು ತಳಿತುದು ನೊಂದವಡಿಗಡಿಗಾತನಶ್ವಚಯ।
ನೂಱು ಶರದಲಿ ಬಳಿ[3]ವಿಶಿಖ ನಾ
ನೂಱರಲಿ ಬಳಿಶರಕೆ ಬಳಿಶರ
ವಾಱು[3] ಸಾವಿರದಿಂದ ತಱಿದನು ಪಾರ್ಥನರಿಬಲವ॥ (?) ೧೯

ಕಡಿವಡೆದವೇಳ್ನೂಱು ರಥ ಮುಱಿ
ವಡೆದವೈನೂಱಶ್ವಚಯ ಮುಂ
ಗೆಡೆದವಂದೈನೂಱು ಗಜವಿಪ್ಪತ್ತು ಸಾವಿರದ।
ಕಡುಗಲಿಗಳುದುರಿತು ತ್ರಿಗರ್ತರ
ಪಡೆ ಕುರುಕ್ಷೇತ್ರದಲಿ ಪಾರ್ಥನ
ಬಿಡದೆ ಬಳಲಿಸಿಯನಿಬರಳಿದುದು ಭೂಪ ಕೇಳೆಂದ॥ ೨೦

ದೊರೆಗಳವರಲಿ ಸತ್ಯ[4]ಕ[4]ರ್ಮನು
ವರ ಸುಶರ್ಮನು ದ್ರೋಣಸಮರದೊ
ಳೆರಡನೆಯ [5]ದಿವಸ[5]ದಲಿ ರಚಿಸಿದರಗ್ನಿ ಸಾಕ್ಷಿಕವ।

---

[1] ಮುಖಕೆ ದೆಸೆಗಳ ಕೆತ್ತವೆನೆ (ಘ.ತ). [2] ರುಚಿ (ತ), ಮಳೆ (ಘ), ಮೊಳೆ (ಪ). [3] ಶರವ ಮೂನೂಱು ವಿಶಿಖವ ಕವಿಸಿದನು ನಾನೂಱು (ಕ), ವಿಶಿಖ ಶರು ಮೂನೂರರಲಿ ಬಳಿರಥದ ನಾನೂಱು (ಖ), ಬಳಿವಿಶಿಖ ನಾನೂಱುಸರಳಿಗೆ ಬಳಿಸರಳುಮುತ್ತಾಱು (ಘ), ನೂಱು ಶರದಲಿ ಕಡಿದು ನೂಱು ವಿಶಿಖವ ನೂಱು (ಟ.ದ). [4] ವ (ಖ.ಟ.ದ). [5] ಸಮರ (ಖ.ಟ.ದ).

ಧುರದ ಶಪಥದೊಳರ್ಜುನನ ಸಂ
ಗರಕೆ ಬೇಸಱಿಸಿದ ಪರಾಕ್ರಮ
ಪರಿ[1]ಗ[1]ತರು ಪವಡಿಸಿದರಂದು ಧನಂಜಯಾಸ್ತ್ರದಲಿ॥ ೨೧

ತಱಿದನಗ್ಗದ ಸತ್ಯಕರ್ಮನ
ಧುರವ ಸಂತೈಸುವ ತ್ರಿಗರ್ತರ
ದೊರೆ ಸುಶರ್ಮನನವನ ಸಹಭವ ಗೋತ್ರ ಬಾಂಧವರ।
ಒರಸಿದನು ಕುರುರಾಯನಾವೆಡೆ
ಬರಲಿ ತನ್ನಾಪ್ತರಿಗೆ ಕೊಟ್ಟೆನು
ಹಱಿವನಿನ್ನಾಹವವಿಲಂಬವ ಮಾಡಬೇಡೆಂದ॥ ೨೨

ಇತ್ತ ಭೀಮನ ಕೂಡೆ ನೂಱಱು
ವತ್ತು ಗಜ ಸಹಿತರಿಭಟರೊಳು
ದ್ವೃತ್ತನಿದಿರಾದನು [2]ಸುದರ್ಶನ[2]ನೆಂಧನೃಪನೊನು।
ಹೆತ್ತಳವ್ವೆ ವಿರೋಧಿಸೇನೆಯ
ಮತ್ತ ಗಜಘಟೆಗೋಸುಗರವಿವು
ಮತ್ತೆ ದೊರಕವು ಕೊಂದಡೆಂದುಮ್ಮಳಿಸಿದನು ಭೀಮ॥ ೨೩

ಸೊಕ್ಕಿದಾನೆಯ ಕೈಯ ಕದಳಿಯ
ನಿಕ್ಕಿ ಬಿಡಿಸುವನಾರು ಪವನಜ
ನೆಕ್ಕತುಳದಲಿ ದಂತಿಘಟೆಗಳ ಮುಱಿದನುರವಣಿಸಿ।
[3]ಇಕ್ಕ[3]ಡಿಯು ಬಸುಱುಚ್ಚುಗಳ ನರ
ಸುಕ್ಕುಗಳ ನಾಟಕದವೊಲು ಕೈ
ಯಿಕ್ಕಿದಾನೆಯ ಹಿಂಡು ಮುಱಿದುದು ನಿಮಿಷಮಾತ್ರದಲಿ॥ ೨೪

ಕೆಡಹಿ ದುರ್ಯೋಧನನ ತಮ್ಮನ
ನಡಗುದಱಿ ಮಾಡಿದನುಳೂಕನ
ಕಡಿದು ಬಿಸುಟನು ನಕುಲ[4]ನಿಪ್ಪತ್ತೈದು[4] ಬಾಣದಲಿ।
ತುಡುಕಿದನು ಸಹದೇವನಂಬಿನ
ಗಡಣದಲಿ ಸೌಬಲನ ಸೇನೆಯ
ಕಡಲ ಮೊಗೆದನು [5]ಮೋದಿದನು ಶರಜಾಲ ಝುಂಕೃತಿಯ[5]॥ ೨೫

---

[1] ಣ (ಟ). [2] ಸುಶರ್ಮಕ (ಖ.ಟ.ದ). [3] ಉಕ್ಕು (ಕ.ಫ). [4] ನೆಪ್ಪತ್ತೆಂಟು (ಖ.ಫ.ತ). [5] ಮೋದಿದವುಶರಜಾಳವರಿಭಟನ (ಕ), ಮೋಹಿದನು ಜನಜಾಲಜಂತ್ರದಲ (ಖ), ನಿಮಿಷದಲಿ ನರನಾಥ ಕೇಳೆಂದ (ಟ.ದ).

ಎಲವೊ ಕಪಟದ್ಯೂತ ಬಂಧದೊ[1]
ಳಳಲಿಸಿದಲಾ ಪಾಪಿ ಕೌರವ
ಕುಲದ ತಲೆ ಸೆಂಡಾಡಿದವ ನೀನೋ ಮದಗ್ರಜನೊ।
ಸಿಲುಕಿದೆಯಲಾ ನಮ್ಮ ಬಾಣದ
ಬಲೆಗೆ ನಿನ್ನನು ಕಾವನಾವವ
ನೆಲೆ ಕಠಾರ ಎನುತ್ತ ನುಡಿದನು ವಗುತ ಸಹದೇವ॥ ೨೧

ವ್ಯರ್ಥವೆಲೆ ಸಹದೇವ ನಿನ್ನ ಕ
ದರ್ಥನಕೆ ಫಲವಿಲ್ಲ ನೀ [2]ಕದ
ನಾರ್ಥಿ[2]ಯೇ ದಿಟ ತೋಱಿಸಾದರೆ ದಾತುವಿಕ್ರಮವ।
ಪಾರ್ಥಭೀಮರ ಮಱೆಯೊಳಿರ್ದು ನಿ
ರರ್ಥಕರನಿಱಿದಿಱಿದು ಜಯವ ಸ
ಮರ್ಥಿಸುವೆ ಫಡ ಹೋಗೆನುತ ತೆಗೆದೆಚ್ಚನಾ ಶಕುನಿ॥ ೨೨

ಮಱುಗದಿರು ನಿಮ್ಮುಭಯ ಪಕ್ಷವ
ತಱಿದು ತುಂಡವ ಸೀಳುವೆನು ತಾ
ಮಱೆವೆನೇ ಭವದೀಯ ಘಟಿತ ವಿಕಾರ ವಿಭ್ರಮವ।
ನೆಱೆ ಪತತ್ರಿಗಳಿವೆ ಪತತ್ರಿಯ
ಮಱುವೆಸರು ನಿನಗಿಷಱ ಕೇಣಿಗೆ
ತೆಱಹುಗೊಡು ನೀನೆಂದು ಮಾದ್ರೀತನುಜ ಮಗುಳೆಚ್ಚ॥ ೨೩

ಎನಲು ಸಹದೇವಾಸ್ತ್ರವನು ಖಂ
ಡಿಸಿ ಶರೌಘದಿನಹಿತವೀರನ
ಮುಸುಕಿದನು ಮೊನೆಗಣೆಗಳೀಡಿಱಿದವು ರಥಾಗ್ರದಲಿ।
ಕುಸುರಿದಱಿದ[3]ತಿರಥನ[3] ಬಾಣ
ಪ್ರಸರವನು ಸಥತುರಗವನು ಭಯ
ರಸವರೋದ್ದಿದ[4]ನುದ್ದಿದನು ಸಹದೇವ[4] ಸೌಬಲನ॥ ೨೪

ತೇರು ಹುಡಿಹುಡಿಯಾಗೆ ಹೊಯ್ದನು
ವಾರುವ[5]ನ[5] ಪೋಲುಗಿದಡಾಯುಧ
[6]ದಾರುಭಟೆಯಲಿ ಬಿಟ್ಟನಾ[6] ಸಹದೇವನಭಿಮುಖಕೆ।

[1] ಬಂಧದ (ಕ), ಕೇಳಿಯೊ (ಪು.ತ). [2] ಕಲಹಾರ್ಥಿ (ಚ.ದ). [3] ರಿರಥಿಕ (ಕ). [4] ನುಸುರಂತೆಗೆಬಗಿಮಾಡಿದನು (ಚ.ದ). [5] ದ (ತ). [6] ಲಾಂಬಿದ್ದನು ಷೂಠಿಯುಲಿ (ಖ.ಪು.ಚ.ತ).

ವೀರನಹೆಯೋ ಶಕುನಿ ಜೂಜಿನ
ಚೋರವಿದ್ಯೆಯ ಬಿಟ್ಟೆಲಾ [1]ಜು[1]
ಜ್ಝಾರನಹೆ ಮಝು ಪೂತೆನುತ ಖಂಡಿಸಿದನಾ ಹಯವ॥ ೩೦

ಬಳಿಕ ಕಾಲಾಳಾಗಿ ಖಡುಗವ
ಝುಳಪಿಸುತ ಬರೆ ಶಕ್ತಿಯಲಿ ಕೈ
ಚಳಕ ಮಿಗೆ ಸಹದೇವನಿಟ್ಟನು ಸುಬಲನಂದನನ।
ಖಳನದೆಯನೊದೆದಪರಭಾಗಕೆ
ನಿಲುಕಿತದು ಗಾಂಧಾರಬಲ ಕಳ
ವಳಿಸೆ ಸುಳಿದನು ಶಕುನಿ ಸುರತರುಣಿಯರ ತೋಳಿನಲಿ॥ ೩೧

ಕವಿದುದಾ ಪರಿವಾರ ವಡಬನ
ತಿವಿವ ತುಂಬಿಗಳಂತೆ ಶಕುನಿಯು
ಬವರಿಗರು ಮಂಡಳಿಸೆ ಸಹದೇವನ ರಥಾಗ್ರದಲಿ।
[2]ತೆವಱಿಸಿದನನಿಬರ[2] ಚತುರ್ಬಲ
ನಿವಹವನು ನಿಮಿಷಾರ್ಧದಲಿ ಸಂ
ತವಿಸಿದನು ಸಹದೇವ ಕೊಂದನು ಸೌಬಲನ ಬಲವ॥ ೩೨

ಹರಿಬದಲಿ ಹೊಕ್ಕೆರಡು ಸಾವಿರ
ತುರಗ ಬಿದ್ದವು ನೂಱು ಮದಸಿಂ
ಧುರಕೆ [3]ಗಂಧನವಾ[3]ಯ್ತು ಪಯದಳವೆಂಟು ಸಾವಿರದ।
ಬರಹ ತೊಡೆದುದು ನೂಱು ರಥ ರಿಪು
ಶರದೊಳಕ್ಕಾಡಿತು ವಿಡಂಬದ
ಕುರುಬಲಾಂಬುಧಿ ಕೂಡೆ ಬಱಿತುದು ನೃಪತಿ ಕೇಳೆಂದ॥ ೩೩

ಓಡಿದವರಲ್ಲಲ್ಲಿ ಧೈರ್ಯವ
ಮಾಡಿ ಹಱಿಹಂಚಾದ ಸುಭಟರು
ಕೂಡಿಕೊಂಡುದು ನೂಱು ಮದದಾನೆಯಲಿ ಕುರುಪತಿಯ।
ಓಡಲೇಕಿನ್ನೊಂದು ಹಲಗೆಯ
ನಾಡಿ ನೋಡುವೆನೆಂಬವೊಲು ಕೈ
ಮಾಡಿದನು ಕುರುರಾಯನಾ ಸಹದೇವನಿದಿರಿನಲಿ॥ ೩೪

1 ಜ (ಘ). 2 ಸವಸಿದನು ಮತ್ತಾ (ಕ). 3 ಖಂಡನವಾ (ಕ), ಗಂಧನವೋ (ಖ.ಘ).

ಧರಣಿಪನ ಥಟ್ಟಣೆಗೆ ನಿಲ್ಲದೆ
ತೆರಳಿದನು ಸಹದೇವನಾತನ
ಹಿರಿಯನಡ್ಡೈಸಿದಡೆ ಕೊಟ್ಟನು [1] ಬೋಳೆಯಂಬಿನಲಿ[1] ।
ಶರಹತಿಗೆ ಸೆಡೆದಾ ನಕುಲ ಪೈ
ಸರಿಸಿದನು ನೂರ್ಬನೆಯಲಿ ಡಾ
ವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ ॥ ೩೫

ಎಲೆ ನಪುಂಸಕ ಧರ್ಮಸುತ ಫಡ
ತೊಲಗು ಕರೆಯಾ ನಿನಗೆ ಭೀಮನ
ಬಲುಹೆ ಬಲುಹರ್ಜುನನ ವಿಕ್ರಮ ವಿಕ್ರಮವು ನಿನಗೆ
ಮಲೆತು ಮೆಱೆಯಾ ಕ್ಷತ್ರಧರ್ಮವ
ನಳುಕದಿರು ನೀ ನಿಲ್ಲೆನುತಲಿ
ಟ್ಟಳಿಸಿ ಬರಲೂಳಿಗದ ಬೊಬ್ಬೆಯ ಕೇಳಿದನು ಭೀಮ ॥ ೩೬

ತೂಳಿ ತುಳಿದವು ನೂಱು ಗಜ ಭೂ
ಪಾಲಕನ ನೆಱೆಗಡಿತೆದಡವಿಗೆ
ಬಾಳೆ ಹೆಮ್ಮರನಾಯ್ತು ಗಡ ಫಡ ನೂಕು ನೂಂ
ಆಲಿ ಕಿಡಿಯಿಡೆ ಕುಣಿವ ಮೀಸೆ ಕ
ರಾಳ ವದನದ ಬಿಗಿದ ಹುಬ್ಬಿನ
ಮೇಲುಗೋಪದ ಭೀಮ ಬಂದನು ಬಿಟ್ಟ ಸೂಠಿಯಲಿ ॥ ೩೭

ನೆತ್ತಿಯುಗತೆಯೊಳೂಱಿದಂಕುಶ
ವೆತ್ತಿದಡೆ ತಲೆಗೊಡಹಿದವು ಬೆರ
ಳೊತ್ತುಗಿವಿಗಳ ಡಾವರಿಪ ಡಾವರದ ಡಬ್ಬುಕದ ।
ಕುತ್ತುವಾರೆಯ ಬಗೆಯದಾನೆಗ
ಳೆತ್ತ ಮುರಿದವು ಸಿಂಹನಾದಕೆ
ಮತ್ತಗಜ ಮೊಗದಿರುಹಿದವು ದಳವುಳಿಸಿದನು ಭೀಮ ॥ ೩೮

ಮೆಟ್ಟಿದನು ಬಲವಂಕವನು ಹೊಱ
ಗಟ್ಟಿದನು ವಾಮದ ಗಜಂಗಳ
ನಿಟ್ಟನೊಂದಱೊಳೊಂದನಪ್ಪಳಿಸಿದನು ಪರಿಘದಲಿ ।

---

[1] ಕೊಂಡ ಬಿಲ್ಲನಲಿ (ಪ).

ಘಟ್ಟಿಸಿದನೊಗ್ಗಿನ ಗಜಂಗಳ
ಘಟ್ಟುಗೆಡಹಿದನಮಮ ಹೆಣಸಾ
ಲಿಟ್ಟವೈ ಕುರುನೃಪನ ನೂಱಾನೆಗಳು ನಿಮಿಷದಲಿ ॥ ೩೯

ಉಳಿದುದಿದಿರಲಿ ಛತ್ರ ಚಮರಾ
ವಳಿಯವರು ಹಡಪಿಗರು ಬಿರುದಾ
ವಳಿಯವರು ಪಾಠಕರು ವಾದ್ಯದ ಮಲ್ಲಗಾಯಕರು ।
ಸಲಿಲ [1]ಭಕ್ಷ್ಯವಿಧಾನಗಜಹಯ
ಕುಲದ ರಕ್ಷವ್ರಣಚಿಕಿತ್ಸಕ
ಗಳಿತ ರಥಚೋದಕರು ಕಾರ್ಮುಕಬಾಣದಾಯಕರು ॥* ೪೦

ಕುದುರೆ ರಾವುತರು ಜೋದಸಂತತಿ
ಮದಗಜವ್ರಜವತಿರಥಾವಳಿ
ಪದಚರರು ಚತುರಂಗಬಲವೊಂದುಳಿಯದಿದಱೊಳಗೆ ।
ಪದದಲೇ ಕೌರವನೃಪತಿ ಜಾ
ಱಿದನು ಕುಂತೀಸುತರು ಬಹಳಾ
ಭ್ಯುದಯರಾದರು ವೀರನಾರಾಯಣನ ಕರುಣದಲಿ ॥ ೪೧

ಎರಡನೆಯ ಸಂಧಿ ಮುಗಿದುದು

---

[1] ವ (ದ). * ಈ ಪದ್ಯ (ಘ) ಪ್ರತಿಯಲ್ಲಿಲ್ಲ.

# ಮೂರನೆಯ ಸಂಧಿ

ಸೂಚನೆ॥ ರಾಯದಳ ಸಲೆ ಸವೆಯೆ ಸಮರದ
ನಾಯಕರು ನೆಱೆ ಮುಱಿಯಲಾ ದ್ವೈ
ಪಾಯನ ಸರೋವರವ ಹೊಕ್ಕನು ಕೌರವರ ರಾಯ ॥

ಕೇಳು ಜನಮೇಜಯಧರಿತ್ರೀ
ಪಾಲ ಕುರುಪತಿ ಹೆಗಲ ಗದೆಯಲಿ
ಕಾಲುನಡೆಯಲಿ ಹಾಯ್ದನೇಕಾಂಗದಲಿ ಕಳನೊಳಗೆ ।
ಆಳ ಕಾಣೆನು ಛತ್ರ ಚಮರದ
ವೀಳೆಯದ ವಿಸ್ತಾರವಿಭವವ
ಬೀಳುಕೊಟ್ಟನು ನಡೆದನಿಂದ್ರದಿಶಾಭಿಮುಖವಾಗಿ ॥ ೧

ಅಕಟ ನಮ್ಮಯ ಪೂರ್ವರಾಜ
ಪ್ರಕರಕೀ ವಿಧಿಯಾಯ್ತಲಾ ಕಂ
ಟಕನಲಾ ಧರ್ಮಪ್ರಭಾವಕೆ ಕೌರವೇಶ್ವರನು ।
ಶಕುನಿಮತ ವಿಷಬೀಜವೇ ಬಾ
ಧಕವ ತಂದುದಲಾ ಯುಧಿಷ್ಠಿರ
ಸಕಲಬಲಪರಿಶೇಷವೇನೆಂದರಸ ಬೆಸಗೊಂಡ ॥ ೨

ಧರಣಿಪತಿ ಕೇಳ್ ಧರ್ಮಜನ ಮೋ
ಹರದೊಳುಳಿದುದು ತೇರು ಸಾ
ವಿರವೆರಡು ಗಜವೇಳ್ನೂಱು ಮಿಕ್ಕುದು ಲಕ್ಕ ಪಾಯದಳ ।
ತುರಗ ಸಾವಿರವೈದು ಸಾತ್ಯಕಿ
ವರ ಯುಧಾಮನ್ಯೂತ್ತಮೌಂಜಸ
ರುರು ಶಿಖಂಡಿ ದ್ರುಪದಸೂನು ದ್ರೌಪದೀಸುತರು ॥ ೩

ಆ ಸುಯೋಧನ ಸೇನೆಯಲಿ ಧರ
ಣೀಶ ಕೃಪ ಕೃತವರ್ಮ ಗುರುಸುತ
ರೈಸುಬಲದಲಿ ನಾಲ್ವರುಳಿದರು ಹೇಳಲೇನದನು ।

ಏನು ಬಲವೆನಿತ್ತೈಶ್ವರಿಯವಿ
ದ್ದೇನು ಭಟರೆನಿತಗ್ಗಳಿಯರಿ
ದ್ದೇನಹಲಿ ಫಲವೇನು ದೈವವಿಹೀನರಿವರೆಂದ || ೪

ಇತ್ತಲೀ ಸಂಜಯನ ತಂದುದು
ಮೃತ್ಯು ದೃಷ್ಟದ್ಯುಮ್ನನೀತನ
ಕುತ್ತ ಕೆಡಹಿದಡಾಗದೇ ಕುರುಡಂಗೆ ರಣರಸವ |
ಬಿತ್ತರಿಸುವನು ಕೌರವನ ಜಯ
ದತ್ತಲೆಱಕ ದುರಾತ್ಮನನು ಕೈ
ವರ್ತಿಸಾ ಯಮನಗರಿಗೆಂದನು ಸಾತ್ಯಕಿಯ ಕರೆದು || ೫

ಸೆಳೆದಡಾಯ್ದವ ಸಂಜಯನ ಹೆಡ
ತಲೆಗೆ ಹೂಡಿದನರಿವ ಸಮಯಕೆ
ಸುಳಿದನಗ್ಗದ ಬಾದರಾಯಣನವನ ಪುಣ್ಯದಲಿ |
ಎಲೆಲೆ ಸಾತ್ಯಕಿ ಲೇಸುಮಾಡಿದೆ
ಖಳನೆ ಸಂಜಯನೆಮ್ಮ ಶಿಷ್ಯನ
ಕೊಲುವುದೇ ನೀನೆನುತ ಕೊಂಡನು [1]ಕೊರಳಡಾಯುಧವ || ೬

ದೇವ ನಿಮ್ಮಯ ಶಿಷ್ಯನೇ ಪರಿ
ಭಾವಿಸೆನು ತಾನಱಿದೆನಾದಡೆ
ದೇವಕೀಸುತನಾಣೆ ಬಿಟ್ಟೆನು ಸಂಜಯನ ವಧೆಯ ||
ನೀವು ಬಿಜಯಂಗೈವುದೆನೆ ಬಿದ
ರಾವಳೀಮಂದಿರಕೆ ತಿರುಗಿದ
ನಾ ಪಿಗಡಮುನಿ ಖೇದಕಲುಷಿತ ಸಂಜಯನ ತೆಗಹಿ || ೭

ಅರಸ ಕೇಳೈ ಸಂಜಯನು ಬರ
ಬರಲು ಕಂಡನು ದೂರದಲಿ ನಿಱಿ
ಗರುಳ ಕಾಲ್ದೊಡಕುಗಳ ಖಂಡದ ಜಿಗಿಯ ಜಾಱುಗಳ |
ಕರಿಗಳೊಟ್ಟಿಲನೇಱಿಳಿದು ಪೈ
ಸರಿಸಿ ಮಿದುಳಿನ ಜೋಱು ಜೊಂಡಿನ
ತೊರಳೆಯಲಿ ದಡದಡಿಸಿ ಜಾಱುತ ಬೀಳುತೇಳುವನು || ೮

[1] ಕಯ್ಯ (ಕ.ಖ.ಟ.ದ).

ಎಡಹುದಲೆಗಳ ದಾಂಟಿ ರಕುತದ
ಮಡುವಿನಲಿ ಗದೆಯೂರಿ ನೆಲೆಗಳ
ಪಡೆದು ಕಂಪಿಸಿ ಕುಣಿವ ಮುಂಡವ ಗದೆಯುಲಪ್ಪಳಿಸಿ ।
ಅಡಿಗಡಿಗೆ ಹೇರಾನೆಗಳ ಕೇ
ರೊಡಲ ಹತ್ತಿಳಿದೇರಿ ಝೊಂಪಿಸಿ
ಮಿಡುಕಿ ನಿಲುವನು ಬಳಲಿದೂರ್ಧ್ವಶ್ವಾಸಲಹರಿಯಲಿ ॥ ೯

ಒಡದಿಹ ನರ ಹದ್ದು ಕಾಗೆಗೆ
ಕೂಡ ಗದೆಯನು ಬೀಸುವನು ಬಿಡೆ
ನೋಡುವನು ಹೆಣದಿ[1]ನಿ[1]ಹಿಗಳ ಹೇರಾಳ ರಕ್ಕಸರ ।
ತೋಡುಗೈಗಳ ಮಿದುಳ ಬಾಯ್ಗಳ
ಬಾಡುಗರುಳಿನ ಚೀತ್ಕೃತಿಯ ತಲೆ
ಯೋಡುಗಳ ತನಿರಕುತಪಾನದ ಶಾಕಿನೀಜನವ ॥ ೧೦

[2]ಕಂ[2]ದ ಪಖ್ಖಲೆಗಳಲಿ ತೀವಿದ
ಮಂದರಕುತದ ತೋ[3]ದ[3] ತಲೆಗಳ
ತಿಂದು ಬಿಸುಡುವ ನೆಣನ ಕಾರುವ ಬಸೆಯ ಬಾಡಿನುವ ।
ಸಂದಣಿಸಿ ಹಱಿದೇಱಿ ಬಾಯ್ಗಳೊ
ಳೊಂದಿ ಬಾಯ್ಗಳನಿಡುವ ಪ್ರೇತನಿ
ವ್ಹಂದವನು ಕಂಡೋಸರಿಸುವನದೊಂದು ದೆಸೆಗಾಗಿ ॥ ೧೧

ಕುಣಿವ ಕರಿಗಳ ತಲೆಯ ಮಡುಹಿನ
ಲಣೆದು [4]ಹಜ್ಜೆಯನಿಡುತ[4] ಭೂತದ
ಹೆಣನ [5]ತೀ[ನಿ]ಗೆ[5] ತವಕಿಸುವ ವೇತಾಳಸಂತತಿಯ ।
ರಣದೊಳಂಜಿಸಿ ಸೆರೆನರದ ಕಾ
ವಣದೊಳಗೆ ಕೈಯೂರಿ ಮಿಗೆ ಹಳ
ವೆಣನ ಹೊಲಸಿ[6]ಗೆ ಹೇಸಿ[6] ಹರಿದಡಿಗಡಿಗೆ ಸು[7]ಯ್ಯು[7]ವನ ॥ ೧೨

ಕಡಿವಡೆದ ಹಕ್ಕರಿಕೆ ಱೆಂಚೆಯ
[8]ತಡಿಗಳಲಿ[8] ಕುಳ್ಳಿರ್ದು ಮೊಣಕಾ
ಲ್ಗಡಿಯ ಗಾಢವ್ರಣದ ನೆಣವಸೆಗೆಸಱ ಬಳಿಬಳಿದು ।

---

[1] ನು (ತ). [2] ತಂ (ಗ.ತ). [3] ದಿ (ಕ), ಡು (ತ.ದ). [4] ಮಜ್ಜೆಯ ಜಿಗಿಯ (ತ). [5] ತಿತೆಗೆ (ಕ), ತೀನೆಗೆ (ಘ.ತ), ನಿಶಿಗೆ (ಗ). [6] ರೆ ಹತಿಗೆ (ಕ). [7] ಯ್ಯು (ಕ). [8] ನಡೆದು ನೆಲ (ತ)

[1]ಗಡಣಹೆಣ[1]ದೇಹುಗಳೊಳಗೆ ಕಾ
ಲಿಡುತ ಸೋದಿಸಿ ಮುಂದೆ ಹೆಜ್ಜೆಯ
ನಿಡುತ ಪೈಸರವೋಗಿ ಮಾರ್ಗಶ್ರಮಕೆ ಬೆಮರುವನ॥ ೧೩

ಕಡಿದ ಕೈದುಗ[1]ಳೊಟ್ಟಿಲ[2]ಲಿ ತನಿ
ಗೆಡೆದ ಗಾಲಿಯ ತಾಯ್ಕೆ ಮೆಲ್ಲಡಿ
ಯಿಡುತ ಹಜ್ಜೆಯ ನೆಣದ ಕೆಸರುಗೆ ಛತ್ರಚಮರಿಗಳ।
ಅಡಸಿ ಹಜ್ಜೆಯನಿಡುತ ರಕುತದ
ಮಡುವನೆಡಬಲಕಿಕ್ಕಿ ಮೆಲ್ಲನೆ
ನಡೆದು ದೈವವ ಬಯ್ದು ಬಯ್ದಡಿಗಡಿಗೆ ಸುಯ್ವುವನ॥ ೧೪

ಘೂತರವ ಭೇತಾಳಕಲಹ ವಿ
ಧೂತ ಜಂಬುಕ ಘೂಕ ಕಾಕ
ವ್ರಾತ ರಭಸಕೆ ಬೆಚ್ಚುವನು ಪಾಂಡವರ ಬಲವೆಂದು।
ಆತು ಮರಳಿದು ಹಿಂದ ನೋಡಿ ಪ. . .
ರೇತ ವಿಭವವಲಾ ಎನುತ ಧಲ
ಚೇತನನು ಸಲೆ ಚಂಡಿಯಾದನು ಕಳನ ಚೌಕದಲಿ॥ ೧೫

[3]ಹೇಳು[3]ವಡೆ ಕುರುಪತಿಯನೇ ನೆಱೆ
ಹೋಲುವನು ಗದೆ ಹೆಗಲಲದೆ ಮೇ
ಲಾಳ ಕಾಣೆನು ಚಮರ ಚಾಹಿಯ ಗಜಹಯಾವಳಿಯ।
ಹೋಲುವುದು ಜನವೊಬ್ಬರೊಬ್ಬರ
ನಾಳೊಳೊಬ್ಬನೊ ಮೇಣು ಕುರುಭೂ
ಪಾಲಕನೊ ನೋಡುವೆನೆನುತಸಂಜಯನು ನಡೆತಂದ॥ ೧೬

ಬಂದು ಕಂಡನು ರಾಜವನವಾ
ಕಂದನನು ಧೃತರಾಷ್ಟ್ರರಾಯನ
ಕಂದನನು [4]ದೌರ್ಜನ್ಯವಲ್ಲೀವಿಪುಳಕಂದನನು[4]।
ಮುಂದುವರಿವ ವಿಲೋಚನಾಂಬುಗ
ಳಿಂದ ಸ್ಮೈರಣೆ ಮಿಗದೆ ಸಂಜಯ
ನಂದು ಮೊಪ್ಪನೆ ಕೆಡೆದು ಹೊರಳಿದನರಸನಂಘ್ರಿಯಲಿ॥ ೧೭

---

[1] ಲಾಗಿಸಿ (ಕ). [2] ಳೊಳಿಯ (ಕ). [3] ಹೋಲು (ಕ). [4] ಸೌಜನ್ಯವಲ್ಲಿವಿಘಾತಿಕಂಧರನ (ಗ), ದೌರ್ಜನ್ಯವಹ್ನೀವಿಪುಳಕಂದರನಾ (ಚ.ದ), ಸೌಜನ್ಯವರ್ಜಿತ ವಿಪುಳಕಂಧರನ (ತ).

ಕಡಲತಡಿ ಪರಿಯಂತ ರಾಯರ
ಗಡಣದಲಿ ನೀನೊಬ್ಬನೆಂಬೀ
ನುಡಿಗೆ ನಿಶ್ಚಯವೀಗಲಾಯಿತು ತಂದೆ ಕುರುರಾಯ ।
ಬಿಡದೆ ಬಾಗುವ ನೃಪರ ಮಕುಟದೊ
ಳಿಡುವ ಕೋಮಲಚರಣವಿದಱೊಳು
ನಡೆಯಲೆಂತೈ ಕಲಿತೆ ಎಂದನು ಸಂಜಯನು ನೃಪನ ॥ ೧೮

ರಣಮುಖದೊಳೇಕಾದ[1][ಶಾ][1]ಕ್ಷೋ
ಹಿಣಿಗೆ ಹಱಿವಾಯ್ತೇ ಯುಧಿಷ್ಠಿರ
ನುಣಲಿ ಧರೆಯನು ಗೋತ್ರವಧವಿನ್ಯಸ್ತಕಿಲ್ಬಿಷವ ।
ಕೆಣಸ ಮಾಡಿದೆ ದೈವದಲಿ ಧಾ
ರುಣಿಯ ಹುದುವಿನ ಸಿರಿಗೆ ಸೇರದೆ
ಹಣಿದವಾಡಿದೆ ರಾಜವಂಶದ ಕಲ್ಪತರುವನವ ॥ ೧೯

ಶಶಿರುಚಿಗೆ ಸೈರಿಸದ ಸಿರಿಮುಡಿ
ಬಿಸಿಲ ಸೆಕೆಗಾಂತುದೆ ಸುಗಂಧ
ಪ್ರಸರಪೂರ್ಣಘ್ರಾಣವೀ ಹಳೆವೆಣನ ಹೊಲಸಿನಲಿ ।
ಉಸುರುದೆಗಹಾದುದೆ ಸುಗೀತದ
ರಸದ ಮಧುವಿಂಗಾಂತ ಕಿವಿ ವಾ
ಯಸ ಸೃಗಾಲಧ್ವನಿಗೆ ಸೊಗಸಿತೆ ತಂದೆ ಕುರುರಾಯ ॥ ೨೦

ಲಲಿತ ಮೃದುತರ ಹಂಸತೂಳದ
ಲಾಳಿತ ಕೋಮಲ ಕಾಯ ಕೈದುಗ
ಳೆಲುಗಳೊಟ್ಟಿಲ ಹಾಸಿನಲಿ ಪೈಸರಿಸಿ ಮಲಗಿತಲಾ ।
ಸುಳಿಯೆ ಕೈಗೊಡುವರಸುಗಳ ಕೆಲ
ಬಲದ ಪಾಯವಧಾರಿನವರನು
ಕಳುಹಿ ಬಂದೈ ಸಾರ್ವಭೌಮರ ಚಿಹ್ನವಿದೆಯೆಂದ ॥ * ೨೧

ಎತ್ತಣೇಕಾದಶ ಚಮೂಪತಿ
ಯೆತ್ತಣೀಯೇಕಾಕಿತನ ತಾ
ನೆತ್ತ ಗಜಹಯ ರಥ ಸುಖಾಸನದತಿಶಯದ ಸುಳಿವು ।

---

[1] ಶ (ಸ). * ಈ ಪದ್ಯ (ಘ) ಪ್ರತಿಯಲ್ಲಿಲ್ಲ.

ಎತ್ತಣೀ ಕೊಳುಗುಳದ ಕಾಲ್ನಡೆ
ಯೆತ್ತಣಾಹವದಭಿಮುಖತೆ ಬಳಿ
ಕೆತ್ತಣಪಜಯವಿಧಿಯ ಘಟನೆ ನೃಪಾಲ ನಿನಗೆಂದ ॥ ೨೨

ಮುಳಿದಡಗ್ಗದ ಪರಶುರಾಮನ
ಗೆಲಿದನೊಬ್ಬನೆ ಭೀಷ್ಮ ಪಾಂಡವ
ಬಲದ ಸಕಲ ಮಹಾರಥರ ಸಂಹರಿಸಿದನು ದ್ರೋಣ ।
ದಳಪತಿಯ ಮಾಡಿದಡೆ ಪಾರ್ಥನ
ತಲೆಗೆ ತಂದನು ಕರ್ಣನೀಯ
ಗ್ಗಳೆಯರಗ್ಗಿತು ಕಡೆಯಲೊಬ್ಬನೆ ಕೆಟ್ಟೆ ನೀನೆಂದ ॥ ೨೩

ಅವರು ಬದುಕಿದರೈವರೂ ನಿ
ನ್ನವರೊಳಗೆ ನೀನುಳಿಯೆ ನೂರ್ವರು
ಸವಿಯಿತವಗೈವರು ಕುಮಾರರು ಸೌಖ್ಯ ಜೀವಿಗಳು ।
ಜವನ ಸಿವಡಿಗೆ ಹತ್ತಿದರು ನಿ
ನ್ನವರು ಮಕ್ಕಳು ನೂಱು ದೈವವ
ನವಗಡಿಸಿ ದುಃಸ್ಥಿತಿಗೆ ಬಂದೈ ತಂದೆ ಕುರುರಾಯ ॥ ೨೪

ಗೆಲಿದನರಸನು ಹಸ್ತಿನಾಪುರ
ದೊಳಗೆ ಕಟ್ಟಿಸು ಗುಡಿಯನೆಂಬೆನೊ
ತಲೆ[1]ಬಳಿಚಿ[1] ತಾನೋಡಿ ಬದುಕಿದನೆಂಬೆನೋ ಮೇಣು ।
ಲಲನೆಯರಿಗೇನೊಸಗೆ ಕುರುಡನ
ನಳಿಸುವೆನೊ ನಗಿಸುವೆನೊ ತಾಯಿಗೆ
ಕಲಿಸು ಬುದ್ಧಿಯನೇನನೆಂಬೆನು ಭೂಪ ಕೇಳೆಂದ ॥ * ೨೫

ಏನು ಸಂಜಯ ಕೌರವೇಶ್ವರ
ನೇನ ಮಾಡಿದನಲ್ಲಿ ಕೊಂತೀ
ಸೂನುಗಳೊಳಾರಳಿದರುಳಿದರು ನಮ್ಮ ಥಟ್ಟಿನಲಿ ।
ಏನು ಹದನೈ ಶಕುನಿ ರಣದೊಳ
ಗೇನ ಮಾಡಿದನೆಂದು ಬೆಸಗೊಳ
ಲೇನನೆಂಬೆನು ತಾಯಿ ಗಾಂಧಾರಿಗೆ ರಣೋತ್ಸವವ ॥ ೨೬

[1] ಬೆರಸಿ (ಕ). * ಈ ಪದ್ಯ (ಘ) ಪ್ರತಿಯಲ್ಲಿಲ್ಲ.

ಹಿಂದೆ ರಾಯನ ಪಟ್ಟದರಸಿಯ
ತಂದು [1]ಭಾರಿಯ[1] ಭಂಗಬಡಿಸಿದೆ
ಬಂದು ಹರಿಯೈದೂರ ಬೇಡಿದರವರ ಚಿತ್ತದಲಿ |
ಕಂದ ಬಿತ್ತಿವೆ ಕದನದಲಿ ನೀ
ನೊಂದು ನೆಳಲುಳಿಯಲು ಸಹೋದರ
ವೃಂದ ತನುಜಜ್ಞಾತಿಬಾಂಧವರಳಿದರದಱಿಂದ ‖ ೨೭

ಕೇಳು ಸಂಜಯ ಪೂರ್ವ ಸುಕೃತದ
ಶಾಳಿವನವೊಣಗಿದೊಡೆ ಭಾರಿಯ
ತೋಳುಗುತ್ತಿನ ಜಯ[2]ಲಕುಮಿ[2] ಜಂಗ[3]ಳ[3]ವ [4]ಜಾಱಿ[4]ದಡೆ |
ಭಾಳಲಿಪಿಗಳ ಲೆಕ್ಕವನು ಪ್ರತಿ
ಕೂಲವಿಧಿ ಪಲ್ಲಟಿಸಿ ಬರೆದಡೆ
ಹೇಳಿ ಫಲವೇನೆನುತ ತುಂಬಿದನರಸ ಕಂಬನಿಯ ‖ ೨೮

ಕದಡಿತಂತಃಕರಣ ವಿಕ್ರಮ
ಉದಧಿ ನೆಲೆಯಾಯಿತು ನಿರರ್ಥಕೆ
ಒದಱಿದಡೆ [5]ಫಲವೇನು[5] ಸಂಜಯ ಹಿಂದನೆಣಿಸದಿರು |
ಕದನದಲಿ ದುಶ್ಶಾಸನನ ತೇ
ಗಿದನಲಾ ಬಕವೈರಿ ತಮ್ಮನ
ನುದರದಲಿ ತೆಗೆವೆನು ವಿಚಿತ್ರವ ನೋಡು ನೀನೆಂದ ‖ ೨೯

ನರನ ಬಸುರಲಿ ಕರ್ಣನನು [6]ಭೂ
ವರನ[6] ಸೀಳಿದು ಶಲ್ಯನನು ಕಾ
ತರಿಸದಿರು ಶಕುನಿಯನುಳೂಕನ ಯಮಳರಿಬ್ಬರಲಿ |
ಹರಿಬಕಿ[7]ದಿರಾಗಲಿ[7] ಮುರಾಂತಕ
ಹರಹಿಕೊಳಲಿ ಮದೀಯಬಾಹು
ಸ್ಫುರಣಶಕ್ತಿಗೆ ಭಂಗಬಾರದು ನೋಡು ನೀನೆಂದ ‖ * ೩೦

ಕಾನನಕೆ ಕೈಯಿಕ್ಕುವರೆ ಪವ
ಮಾನ[8]ನನು ಪಾವಕನು ಬಯಸುವ
ಭಾನು ಭಾರಿಯ ತಮವ ತಿಮಿವನದಾರ ನೆರವಿಯಲಿ[8] |

---

[1] ಸಭೆಯಲಿ (ಕ). [2] ವಧುವ (ಕ). [3] ಣ (ಗ.ಟ). [4] ದಾಂಟಿ (ಘ.ತ). [5] ಬೆದಱಿದೆನು (ಕ). [6] ನೃಪನರನ (ಕ). [7] ದೆಲಾಗದೆ (ಘ.ತ).
* (ಘ) ಪ್ರತಿಯಲ್ಲಿ ೩೦-೩೧ನೆಯ ಪದ್ಯಗಳು ಹಿಂದುಮುಂದಾಗಿವೆ. [8] ಸುಖಗಾರೊಲವು ತಿಮಿರವ ಭಾನು ತೊಲಗಿಸಿ ಕಳೆವ ನೋಡಲದಾರನೆರವಿನಲಿ (ತ).

ಈ ನಿಭೃತ ಗದೆಯಿರಲು ಕುಂತೀ
ಸೂನುಗಳ ಕೈಕೊಂಬೆನೇ ಮನ
ಹೀನ[1]ನ್ಯೆ ನೀ[1]ನಕಟ ಸಂಜಯ ಎಂದನಾ ಭೂಪ ॥ ೩೧

ಆಳು ಬಿದ್ದುದು ಬೇಹ ನಾಯಕ
ರೋಲ[2]ಗ[2]ಸಿತವರಿಯರನೀ ರಣ
ದೂಳಿಗಕೆ ನಾನೊಬ್ಬನೆಂದೇ ನಿನಗೆ ತೋ[3]ಱುತಲಾ[3] ।
ಆಳ ಹಂ[4]ಗನು[4] ನಾಯಕರ ಬಿಲು
ಗೋಲ ಜೋಡಿನ ಬಲವ ಚಿತ್ತದೊ
ಳಾಳಿದೊಡೆ ಧೃತರಾಷ್ಟ್ರರಾಯನ ಕಂದನಲ್ಲೆಂದ ॥ ೩೨

ಖ್ಯಾತಿ ಕಂದದು ಮನದ ಧೈರ್ಯದ
ಧಾತು ಕುಂದದು ಲಜ್ಜೆಯಭಿಮಾತ
ಜಾತಿಗೆಡದು ವಿರೋಧ ಬಿಡದು ಯುಧಿಷ್ಠಿರಾದ್ಯರಲಿ ।
ಏತಕಿದು ನಿನ್ನೀ ಪ್ರಳಾಪ ವಿ
ಧೂತರಿಪು ಕುರುರಾಯನೆಂಬೀ
ಖ್ಯಾತಿಯಲ್ಲದೆ ಬೇಱೆ ರಾಜ್ಯವನೊಲ್ಲೆ ನಾನೆಂದ ॥ ೩೩

ಜೀಯ ನಿಮ್ಮಡಿಗಳಿಗೆ ಗುರುಗಾಂ
ಗೇಯ ವಿದುರಾದಿಗಳು ಹೇಳಿದ
ಜೋಯಿಸವ ಕೈಕೊಂಡಿರೇ [5]ನ[5]ಮ್ಮೀ ಪ್ರಳಾಪದಲಿ ।
ರಾಯ ಫಲವೇನ್ಯೆ ಯುಧಿಷ್ಠಿರ
ರಾಯನೊಲಿದಂತಿರಲಿ ನಿಮ್ಮಯ
ತಾಯಿತಂದೆಗೆ ಹೇಳ್ವೆನೇನನು ಬುದ್ಧಿಗಲಸೆಂದ ॥ ೩೪

ಇದೆ ಸರೋವರವೊಂದು ಹರಿದೂ
ರದಲಿ ಭುವನಖ್ಯಾ[6]ತ ತನ್ಮ
ಧ್ಯದಲಿ[6] ಮುಳುಗಿಹೆನೊಂದುದಿನ ಪರಿಯಂತ ನಲಿಲದಲಿ ।
ಕದನದಲಿ ಕೌಂತೇಯರನು ಯಮ
ಸದನದಲಿ ತೋಱುವೆನು ತಾನೆಂ
ಬುದು ರಹಸ್ಯವು ಜನನಿ ಜನಕಂಗಱುಹು ನೀನೆಂದ ॥ ೩೫

---

[1] ನೇತಾ (ಖ). [2] ಯಿ (ಖ,ಗ,ತ). [3] ಱುವೆನು (ಖ). [4] ಗಿನ (ಕ).
[5] ನಿ (ಖ,ಚ,ದ.ತ). [6] ಹಿಯೊಳು ಧ್ಯಾನದಲು (ಕ).

ತೆಗಸು ಪಾಳೆಯವೆಲ್ಲವನು ಗಜ
ನಗರಿಗೈದಿಸು ರಾಣಿಯರ ದಂ
ಡಿಗೆಯ ಕಳುಹಿಸು ಸೂತಸುತ ದುಶ್ಶಾಸನಾದಿಗಳ ।
ಹಗೆಯ ವಿಜಯವ ಹರಹದಿರು ನಂ
ಬುಗೆಯ ನುಡಿಯಲಿ ಭಾನುಮತಿಯರ
ಬಗೆಯ ಸಂತೈಸೆಂದು ಬೀಳ್ಕೊಟ್ಟಿಸಿದನು ಸಂಜಯನ ॥ ೩೬

ಎನುತ ಸಂಜಯಸಹಿತ ಕೌರವ
ಜನಪ ಬಂದನು ತತ್ಸರೋವರ
ಕನಿಲನಿದಿರಾದನು ಸುಗಂಧದ ಶೈತ್ಯಪೂರದಲಿ ।
ತನುವಿಗಾಪ್ಯಾಯನದಿನಂತ
ರ್ಮನಕೆ ಪಲ್ಲಟವಾಯ್ತು ಭೀಮನ
ಜನಕನಱಿದನು ತನ್ನ ಗುಪ್ತಸ್ಥಾನಸಂಗತಿಯ ॥ ೩೭

ಉಲಿವ ಕೋಕಿಲ ಪಾಠಕರ ಮೊರೆ
ವಳಿಕುಳದ ಗಾಯಕರ ಹಂಸಾ
ವಳಿಯ ಸುಭಟರ ಜಡಿವ ಕೊಳರ್ವಕ್ಕಿಗಳ ಪಡಿಯಱರ ।
ಅಲರ್ದ ಹೊಂದಾವರೆಯ ನವಪರಿ
ಮಳದ ಸಿಂಹಾಸನದಿ ಲಕ್ಷ್ಮೀ
ಲಲನೆಯೋಲಗಶಾಲೆಯಂತಿರೆ ಮೆಱೆದುದಾ ಸರಸಿ ॥ ೩೮

[1]ಬಂ[1]ದು ತಡಿಯಲಿ ಸಂಜಯನ ಕರೆ
ದೆಂದನೀ ಸರಸಿಯಲಿ ತಾನಿಹೆ
ನಿಂದಿನೀ ದಿವಸವನು ಕಳೆವೆನು ಕೊಳನ ಮಧ್ಯದಲಿ ।
ಮುಂದೆ ಪಾಂಡವರೈವರನು ಗೆಲಿ
ದಂದು ಹೊಗುವೆನು ಗಜಪುರವನಿಂ
ತೆಂದು ಜನನಿಗೆ ಜನಕವಿದುರರಿಗಱುಹು ನೀನೆಂದ ॥ ೩೯

ಚಾರು ಚಂದ್ರೋಪಲದ ರಮ್ಯಾ
ಗಾರದಲಿ ಮಣಿಮಯದ ಬಹುವಿ
ಸ್ತಾರದ ಪದ್ಮೋಪರಿಯ ಭವನದ ಚಿತ್ರಶಾಲೆಯಲಿ ।

[1] ನಿಂ (ಪು.ತ).

ಸಾರಮಣಿ ಪರಿಯಂಕ[1]ಪರಿಸಂ
ಸ್ಕಾ[1]ರದಲಿ ಮಲಗುವ ಮಹೀಪತಿ
ನೀರೊಳೊಱಗುವನೆಂದು ಸಂಜಯನೊಱಲಿದನು ಹೊರಳಿ ॥ ೪೦

ಒಱಲದಿರು ಸಂಜಯ ವಿರೋಧಿಗ
ಳಱಿವ[2]ರಾನಿ[2]ದ್ದೆಡೆಯನಿಲ್ಲಿಯೆ
ಮಱೆದು ಕಳೆ ಪಾಳೆಯವ ತೆಗೆಸಬುಜಾಕ್ಷಿಯರ ಕಳುಹು।
ತೆಱಹುಗೊಡು ನೀ ಹೋಗೆನುತ ಮುಂ
ಜೆಱಗನಳವಡೆ ಸೆಕ್ಕಿ ಪೂರ್ವದ
ಲಱಿದ ಸಲಿಲಸ್ತಂಭ[3]ವಿದ್ಯೆಯನರಸ ಚಿಂತಿಸಿದ[3] ॥ ೪೧

ಚರಣವದನ[4]ಕ್ಷಾಲನಾಂತಃ
ಕರಣಶುದ್ಧಿಯಲಾ[4]ಚಮನವಿ
ಸ್ಮರಣದಲಿ ಸತ್ಪ್ರಣವವಂಗನ್ಯಾಸವಿಧಿಗಳಲಿ।
ವರುಣ ಮಂತ್ರಾಕ್ಷರದ ಜಪ[5]ಪರಿ
ಕರಣದಲಿ ನಿರ್ಮುಕ್ತ ಚೇತಃ
ಸ್ಫುರಣಸಲಿಲ[5]ಸ್ತಂಭನವನವನೀಶ ಮಂತ್ರಿಸಿದ ॥ ೪೨

ದ್ಯುಮಣಿ ಮೊದಲಾದಖಿಳ ಸುರರಿಗೆ
ನಮಿಸಿ ವರುಣಧ್ಯಾನವನು ಹೃ
ತ್ಕಮಲದಲಿ ನೆಲೆಗೊಳಿಸಿ ನಾಲುಕು ದೆಸೆಯನಾರೈದು।
ಕುಮತಿಯಿಳಿದನು ಜಾನು ಕಟಿ ಹೃ
[6]ತ್ಕಮಲಗಳ ಮುಖ[6] ಮೂರ್ಧ ಪರಿಯಂ
ತಮರಿಮುದು ಜಲ ಕೊಳನ ಮಧ್ಯದಲರಸ ಪವಡಿಸಿದ॥ ೪೩

ಕುರುಪತಿಯ ಬೀಳ್ಕೊಂಡು ಸಂಜಯ
ಮರಳಿದನು ತನಗಾದ ಹಿಂದಣ
ಪರಿಭವವ ನೆನೆದಡಿಗಡಿಗೆ ಕಂಪಿಸುತ ಮನದೊಳಗೆ।
ಧುರದ ಮಧ್ಯದೊಳೊಬ್ಬನೇ ನಡೆ
ತರುತ ಭೂತಾವಳಿಯನೀಕ್ಷಿಸಿ
ಗುರುವ ನೆನೆದನು ಕೇಳು ಜನಮೇಜಯ ಮಹೀಪಾಲ॥ * ೪೪

---

[1] ಬಹುವಿ (ಫ.ತ). [2] ರೆನ್ನಿ (ಟ.ದ). [3] ಮಂತ್ರವನರಸ ಜಪಿಸಿದನು (ಖ.ಪ). [4] ಕ್ಷಾಲನಾದಂತರ ಪದತ್ರಯದಾ (ಕ), ವ ತೊಳೆದು ತದನಂತರ ಪದತ್ರಯದಾ (ಖ). [5] ವಿಸ್ತರಣದಂಗೀಕೃತದ ಚೇತಃಸ್ಫುರಣನಾದಿಪಯೋಧಿ (ಗ.ತ). [6] ದ್ಗಮಗಳಾನನ (ಫ.ತ). * ಈ ಪದ್ಯ (ಖ.ಫ.ತ.) ಪ್ರತಿಗಳಲ್ಲಿಲ್ಲ.

ಬರುತ ಸಂಜಯು ದೂರದಲಿ ಕೃಪ
ಗುರುಸುತರ ಕೃತವರ್ಮಕನ ಕಂ
ಡರಿರಥಿಗಳಿವರಲ್ಲಲೇ ಶಿವಶಿವ ಮಹಾದೇವ ।
ಭರತಕುಲ ಮೊದಲೊಂದು ಬಳಿಕಾ
ಯ್ತಿರಡುಕವಲೊಬ್ಬರಿಗೆ ಜಯುವಿ
ಸ್ತರಣ ಗದುಗಿನ ವೀರನಾರಾಯಣನ ಕರುಣದಲಿ ॥ ೪೫

ಮೂಱನೆಯ ಸಂಧಿ ಮುಗಿದುದು.

# ನಾಲ್ಕನೆಯ ಸಂಧಿ

**ಸೂಚನೆ॥** ರಾಯಧರ್ಮಜ ಯಮಳ ಫಲುಗುಣ
ವಾಯುಸುತರಱಿಸಿದರು ಕೌರವ
ರಾಯನನು ಕಳನೊಳಗೆ ಕಾಣದೆ ಮುತ್ತಿದರು ಕೊಳನ ॥

ಕೇಳು ಜನಮೇಜಯ ಧರಿತ್ರೀ
ಪಾಲ ಸಂಜಯ ಬರುತ ಕುರುಭೂ
ಪಾಲನಱಕೆಯ ಭೀಮನವರಿವರಲ್ಲಲೇ ಎನುತ।
ಮೇಲೆ ಹತ್ತಿರ ಬರಬರಲು ಸಮು
ಪಾಳಿಯಲಿ ರಥ ಮೂಱಱಲಿ ಕೃಪ
ಕೋಲ ಗುರುಪಿನ ಮಗನಲಾ ಎನುತಲ್ಲಿಗೈತಂದ॥ ೧

ಇಳಿದು ರಥವನು ಸಂಜಯನ ಬರ
ಸೆಳೆದು ತಕ್ಕೈಸಿದರು ಹಗೆಯಲಿ
ಸಿಲುಕಿ ಬಂದೈ ಭಾಗ್ಯದಲಿ ಧೃತರಾಷ್ಟ್ರಭೂಪತಿಯ।
ಕಲಹಗತಿಯೇನಾಯ್ತು ಶಕುನಿಯ
ದಳದೊಳಿದ್ದನು ಕೌರವೇಶ್ವರ
ನುಳಿದನೇ ಹದನಾವುದೆಂದರು ಭಟರು ಸಂಜಯನ॥ ೨

ಅಱಿದುದಿಲ್ಲಾ ಕೌರವೇಂದ್ರನ
ನಱಿಸಿ ಶಕುನಿಯ ದಳವ ಮುತ್ತಿ[1]ದ
ರಿಱಿ[1]ದರವರ ತ್ರಿಗರ್ತರನು [2]ಸೌಬಲ[2] ಸುಶರ್ಮಕರ।
ಮುಱಿದ [3]ಬವರವ[3] ಬಲಿದು ಗಜ ನೂ
ಱಱಲಿ ಹೊಕ್ಕನು ರಾಯನಹಿತ[4]ರ[4]
ಜಱಿದು [5]ಝಾ[5]ಡಿಸಿ ಬೀದಿವರಿದನು ರಾಯದಳದೊಳಗೆ॥ ೩

ಬಳಿಕ ಭೀಮನ ಗದೆಯಲಿಭಶತ
ವಳಿದರೊಬ್ಬನೆ ತಿರುಗಿ ಹಾಯ್ದನು
ಕೊಳುಗುಳದ ಕೋಳ್ಗುದಿಯ ಕೋಲಾಹಲದ ಕೆಸಱಿನಲಿ।

---

[1] ದುತಱಿ (ಖ). [2] ಶಕುನಿಯ( ಘ.ತ) [3] ಬಲವನು (ಖ). [4] ನ (ಕ).
[5] ಜೋ (ತ).

ತಲೆಗೆ ಬಂದುದು ತನಗೆಯಾಕ್ಷಣ
ಸುಳಿದರೆಮ್ಮಾರಾಧ್ಯ [1]ವರ[1] ಮುನಿ
ತಿಲಕ ವೇದವ್ಯಾಸದೇವರು ಕೃಪೆಯ ಭಾರದಲಿ॥ ೪

ಸೆಳೆದುಕೊಂಡನು ಮೃತ್ಯುವಿನ ಹೆಡ
ತಲೆಯನೊದೆದು ಕೃಪಾಳು ತನ್ನನು
ತಲೆಬಳಿಚಿ ಕಳುಹಿದರೆ ಬಂದೆನು ರಾಯನಱಕೆಯಲಿ।
ಬಳಲಿ ಬೀಳುತ್ತೇಳುತೊಬ್ಬನೆ
ತಲೆಮುಸುಕಿನಲಿ ನಡೆಯೆ ಕಂಡೆನು
ನೆಲನೊಡೆಯನಹುದಲ್ಲೆನುತ ಸುಳಿವೆನು ಸಮೀಪದಲಿ॥ ೫

ಕಂಡೆನರಸನ [2]ನಿಬ್ಬರವ ಬಳಿ
ಕಂಡಲೆದುದತಿಶೋಕಶಿಖಿ ಕೈ[2]
ಗೊಂಡುದಿಲ್ಲರೆಘಳಿಗೆ ಬಳಿಕೆಚ್ಚತ್ತು ಕಂದೆಱೆದು।
ಖಂಡಿಸಿದನೆನ್ನುಬ್ಬೆಯನು ಹುರಿ
ಗೊಂಡುದಾತನ ಸತ್ವವಾತನ
ದಂಡಿಯಲಿ ಬಹರಾರು ಸುರ ನರ ನಾಗಲೋಕದಲಿ॥ ೬

ಬಂದನೆನ್ನನು ಸಂತವಿಡುತಲ
ದೊಂದು ಸರಸಿಯ ತಡಿಯಲಳವಡೆ
ನಿಂದು ಸಂವರಿಸಿದನು ಗದೆಯನು ಬಾಹುಮೂಲದಲಿ।
ತಂದೆಗಱುಹೆಂದೆನಗೆ ಹೇಳಿದು
ಹಿಂದೆ ಮುಂದೆಡಬಲನನಾರೈ
ದಂದವಳಿಯದೆ ನೀರ ಹೊಕ್ಕನು ಕಾಣೆನವನಿಪನ॥ ೭

ಅವರು ಕಂಬನಿದುಂಬಿದರು ಕೌ
ರವ ಮಹಾವಂಶಾಭಿಚಾರ
ವ್ಯವಸಿತಕೆ ಫಲವಾಯ್ತಲಾ ಯಮನಂದನಾದಿಗಳ।
ಶಿವಶಿವಾ ಪವಡಿಸಿತೆ ಚತು[3][ರ][3]
ರ್ಣವ [4]ವಿಪರಿ[4]ಪರಿಧಾನ ಪೃಥ್ವೀ
[5]ಧವನ[5] ಬಾಳಿಕೆ ನೀರೊಳೆಂದಳಲಿದನು ಗುರುಸೂನು॥ ೮

---

[1] ಪದ (ಘ.ತ). [2] ಬರಬರಲು ಬಳಿಕಂಡಲೆದುದತಿಶೋಕರಸವೆಲೆ (ಖ.ಘ.ತ). [3] ರಾ (ಸ). [4] ವಿಧಿಯ (ಘ.ತ). [5] ಯುವತಿ (ಕ).

ಅಳಲದಿರಿ ಗಜಪುರಿಗೆ ಸತಿಯರ
ಕಳುಹುವೆನು ನೀವವನಿಪಾಲನ
ತಿಳುಹಲಾಪಡೆ ಸಂಧಿಗೊಡಬಡಿಸುವದು ಕುರುಪತಿಯು।
ಕೊಳನ ತಡಿಯಲಿ ಕಾಣದಂತಿರೆ
ಬಳಸಿ ನೀವೆಂದವರನತ್ತಲು
ಕಳುಹಿ ಸಂಜಯ ಬಂದು ಹೊಕ್ಕನು ನೃಪನ ಪಾಳೆಯವ॥ ೯

ಅರಮನೆಗೆ ಬಂದಖಿಳ ಸಚಿವರ
ಕರಸಿದನು [1]ಸರ[1]ಹಸ್ಯವನು ವಿ
ಸ್ತರಿಸಿದನು ಸರ್ವಾಪಹಾರವ ನೃಪಪಲಾಯನವ।
ಅರಸಿಯಱಿದಳು ಭಾನುಮತಿ ಮಿ
ಕ್ಕರಸಿಯರಿಗಱುಹಿಸಿದಳಂತಃ
ಪುರದೊಳಲ್ಲಿಂದಲ್ಲಿ ಹರೆದುದು ಕೂಡೆ ರಣಭೀತಿ॥ ೧೦

ಕೂಡೆ ಗಜಬಜವಾಯ್ತು ಪಾಳೆಯ
ವೋಡಿತಲ್ಲಿಯದಲ್ಲಿ ಜನವ
ಲ್ಲಾಡಿದುದು [2]ಕ್ರಯವಿಕ್ರಯದ ವಾಣಿಜ್ಯವೀಥಿಯಲಿ[2]।
ಹೂಡಿದವು ಬಂಡಿಗಳು ಹರಿದೆಡೆ
ಯಾಡಿದವು ಕೊಲ್ಲಾರಿಗಳು ರಥ
[3]ಗೂ[3]ಡಿದವು ಬದ್ದರದ ದಂಡಿಗೆ ಬಂದವರಮನೆಗೆ॥ ೧೧

ಭಾನುಮತಿ ಹೊಱವಂಟಳರಸನ
ಮಾನಿನಿಯರು ಸಹಸ್ರಸಂಖ್ಯೆಯೊ
ಳಾನನೇಂದುಪ್ರಭೆ ವಿಭಾಡಿಸೆ ಬಿಸಿಲ ಬೇಗೆಗಳ।
ಭಾನುದತ್ತನ ಸೈಂಧವನ ರವಿ
ಸೂನುವಿನ ದುಶ್ಶಾಸನನ ಜಲ
ಜಾನನೆಯರೊಗ್ಗಿನಲಿ ರಥವೇಱಿದರು ದುಗುಡದಲಿ॥ ೧೨

ಸರಕಹಿಡಿದವು ಬಂಡಿ ಶತಸಾ
ವಿರ ನೃಪಾಲಯದಿಂದ ವಿವಿಧಾ
ಭರಣಭರಿತದ ಭೂರಿ ಪೆಟ್ಟಿಗೆ [4]ಘಾಡಿಸಿತು[4] ರಥವ।

---

[1] ರಾ (ಟ.ದ). [2] ವಿಕ್ರಯಿಪ ವಿಪಣಜ್ಯಾದಿಗಳ ವೀಥಿಗಳ (ತ). [3] ಹೂ (ಕ.ಖ). [4] ಪೂರಿಸಿತು (ಕ).

ವರದುಕೂಲದ ಪಟ್ಟೆಕರ್ಮುದ
[1]ಥರದದಿಂ[1]ದೊತ್ತಿದವು [2]ಚಾಮೀ
ಕರಮಯದ ಬಹುವಿಧದ ಭಾಂಡದ ಬಂಡಿ ನೂಕಿದವು[2]॥ ೧೩

[3]ಬ[3]ಳಿಯ ಚೌರಿಯ ಹೊಱೆಯ ಚಿತ್ರಾ
ವಳಿ ವಿಧಾನದ ಹಾಸುಗಳ ಹೊಂ
ಬಳಿಯ ತೆರೆಸೀರೆಗಳ ಛತ್ರ ವ್ಯಜನ ಸೀಗುರಿಯ।
ಹೊಳೆವ [4]ಪಟ್ಟೆಯಲೋಡಿಗೆಯ[4] ಹೊಂ
ಗೆಲಸದೊಳುಝುಗೆಗಳ ಸುವರ್ಣಾ
ವಳಿಯ ದಿಂಡುಗಳೊಟ್ಟಿದವು ಬಂಡಿಗಳ ಜವ ಜಡಿಯೆ॥* ೧೪

ಕರವತಿಗೆ ಹೊಂಗಳಸ ಹೊಂಗೊ
ಪ್ಪರಿಗೆ ದೀಪಸ್ತಂಭ ಹೇಮದ
ಸರಪಣಿಯ ಮಣಿಮಯದ ಜಂತ್ರದ ಜೀವಪುತ್ರಿ[5]ಗಳ[5]।
ಮರಕತದ ಮ[6]ಧು[6]ಪಾತ್ರೆ ನೀಲದ
ಕರಗ ವೈಡೂರಿಯದ ಪಡಿಗವ
ಚರರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ॥* ೧೫

ಮೆಱೆವ ಗಜ ಹಯಶಾಲೆಯಲಿ ಮ್ಯೊ
ಮುಱಿಕ ವೃದ್ಧ ವ್ಯಾಧಿತಾವಳಿ
ಮಱಿಗುದುರೆ ಮಱಿಯಾನೆ ತೆಗೆದವು ಲಕ್ಕ ಸಂಖ್ಯೆಯಲಿ।
ಉಱುವ ಭಂಡಾರದ ಮಹಾ[7]ರ್ಘದ[7]
ನೆಱವಣಿಗೆ ಗಾಢಿಸಿತು ಬೀದಿಯ
ತೆಱಹು ಕೆತ್ತವು ಹೊತ್ತ ಸರಕಿನ ಬಹಳ ಬಂಡಿಗಳ॥* ೧೬

---

[1] ಥರದಲಂ (ಘ), ಥರಗಳಿಂ (ತ). [2] ಪರಿಪರಿಯ ಹೇಮದಬಂಡಿ ಬಹುವಿಧದಿಂದ ಜೋಡಿಸಿತು (ಖ). [3] ಬಿ (ಖ.ಟ.ದ). [4] ಹೇಮದ ತೊಡಿಗೆಯನು (ಕ). [5] ಕೆಯ (ಟ.ದ). [6] ಣಿ (ಟ.ದ).

*೧೪–೧೫ ನೆಯ ಪದ್ಯಗಳು (ತ) ಪ್ರತಿಯಲ್ಲಿ ಹಿಂದುಮುಂದಾಗಿವೆ. ೧೫–೧೬ ನೆಯ ಪದ್ಯಗಳು (ಘ) ಪ್ರತಿಯಲ್ಲಿಲ್ಲ. ೧೫ ನೆಯ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ:

ವರರತುನಕೇವಣದ ಹೇಮದ। ಹರಿಯಹರಿಯಣಗಳಂತರತರ
ವರಿದುವೆರೆದಿಹ ಕೆಲದ ತಟ್ಟೆಯ ಪರಿಯ ತಟ್ಟೆಗಳ।
ಥರದಲೊಟ್ಟಿದ ಕೋಟಿಸಂಖ್ಯೆಯ। ನಿರದಕಾಂಚನ ರಚಿತನಾನಾ
ಪರಿತ್ರಿವೋಹದ ಭಾಜನಂಗಳ ರಥದ ಮಧ್ಯದಲಿ॥

[7] ರ್ಣವ (ಕ), ರ್ಘದ (ಖ.ಟ.ಪ).

ರಾಯನರಮನೆ ಮಂಡವಿಗೆ ಗುಡಿ
ಲಾಯ ಚವುಕಿಗೆ ನಿಖಿಳ ಭವನನಿ
ಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಯಲಿ।
ರಾಯನನುಜರ ದ್ರೋಣ ಕೃಪ ರಾ
ಧೇಯ ಸೈಂಧವ ಶಕುನಿ ರಾಜಪ
ಸಾಯಿತರ [1]ಗುಡಿಗೂಢ[1]ಚಂಪಯವೇಱಿದವು ರಥವ॥ ೧೭

ಪಾಳೆಯಕೆ ಗಜಪುರದ ವಂಕಕೆ
ಕೀಲಿಸಿತು ದಂಡಿಗೆಯ ಸಂದಣಿ
ಮೇಲುಸರಕಿನ ಬಂಡಿ ತಲೆವೊಱಿಯೆತ್ತು ಕಂಬಿಗಳ।
ಹೇಳಲೇನು ಸಮುದ್ರ ವಿಭವವ
ನೇಳಿಸುವ ಪಾಳೆಯದ ಸಿರಿ ಶೂ
ನ್ಯಾಲಯಕೆ ಜೋಡಿಸಿತಲೈ ಜನಮೇಜಯಕ್ಷಿತಿಪ॥ ೧೮

ತುಂಬಿತಿದು ಗಜಪುರವನಲ್ಲಿಯ
ಕಂಬನಿಯು ಕಾಲುವೆಯನದನೇ
ನೆಂಬೆನೈ ಗಜಬಜಿಕೆ ಮೊಳೆತುದು ಕೇರಿಕೇರಿಯಲಿ।
ಲಂಬಿಸಿತು ಭಯತಿಮಿರ ಶೋಕಾ
ಡಂಬರದ ಡಾವರ ವಿವೇಕವ
[2]ಝೊಂಬಿ[2]ಸಿತು ಧೃತರಾಷ್ಟ್ರ ವಿದುರರ ಪೌರಪರಿಜನದ॥ ೧೯

ಬಂದು ಸಂಜಯನಂಧನೃಪತಿಯ
ಮಂದಿರವ ಹೊಕ್ಕಖಿಳ ನಾರೀ
ವೃಂದವನು ಕಳುಹಿದನು ದಂಡಿಗೆಗಳಲಿ ಮನೆಮನೆಗೆ।
ಬಂದರಾರೆನೆ ಸಂಜಯನು ಜೀ
ಯೆಂದಡುತ್ಸಾಹದಲಿ ಬಂದೈ
ತಂದೆ ಸಂಜಯ ಬಾಯೆನುತ ತಡವಿದನು ಬೋಳೈಸಿ॥ ೨೦

ಹೋಗಿ ತಳುವಿದೆ ಕೌರವೇಂದ್ರನ
ನೀಗಿದಳೆ ಜಯಲಕ್ಷ್ಮಿ ಪಾಂಡವ
ರಾಗುಹೋಗೇನಾಯ್ತು ಶಕುನಿಯ ಹಯದ ಮೋಹರವ।

[1] ಗೂಢಾರ (ಖ.ಟ.ಪ). [2] ಝುಂಬಿ (ಖ.ಗ.ಘ.ಟ.ದ.ಪ).

ತಾಗಿ ಮುಱಿದನೆ ಭೀಮ[1]ನೀ ಮೇ
ಲ್ವೋಗಿನಾಹವ[1] ವೇನು ರಾಯನ
ತಾಗು ಥಟ್ಟೇನಾಯ್ತು ಸಂಜಯ ತಿಳಿಯ ಹೇಳೆಂದ॥ ೨೧

ಶಕುನಿ ಬಿದ್ದನು ಜೀಯ ಸಹದೇ
ವಕನ ಕೈಯಲ್ಲುಳೂಕ ಮಡಿದನು
ನಕುಲನಂಬಿನಲಾ ತ್ರಿಗರ್ತ ಸುಶರ್ಮಕಾದಿಗಳು।
ಸಕಲ ಗಜಹಯಸೇನೆ [2]ಸಮು[2]ಸ
ಪ್ತಕರು ಪಾರ್ಥನ ಶರದಲಮರೀ
ನಿಕರವನು ಸೇರಿದರು ಹೇಳುವುದೇನು ರಣರಸವ॥ ೨೨

ಬಳಿಕ ನೂಱಾನೆಯಲಿ ನಿನ್ನವ
ನಳವಿಗೊಟ್ಟನು ಭೀಮಸೇನನ
ಚಲಗತಿಯ [3]ಚಾತುರ ಚಪೇಟ ಪದ[3]ಪ್ರಹಾರದಲಿ॥
ಕಳನೊಳಗೆ ಕೋಡೂಱಿ ಮುಗ್ಗುಲ
ನೆಲಕೆ ಕೀಲಿಸಲಾನೆಯಿಂದಿಳೆ
ಗಿಳಿದು ಹಾಯ್ದನು ಭಯದಿನೇಕಾಂಗದಲಿ ಕುರುರಾಯ॥ ೨೩

ಕುರುಪತಿಯನಱಸುತ್ತ ತ್ತಾನ್ಯೈಗಸು
ತರಲು ಸಾತ್ಯಕಿ ಕಂಡು ಸೂಠಿಯ
ಉರವಣಿಸಿ ಹರಿತಂದು ಹಿಡಿದನು ಹೊಯ್ದು ಕೆಲಬಲನ।
ಕರೆದು ಧೃಷ್ಟದ್ಯುಮ್ನ ತನ್ನಯ
ಶಿರವನರಿಯನೆ ಬಳಿಕ ಸಾತ್ಯಕಿ
ಕರದ ಖಡುಗವನುಗಿದು ಹೂಡಿದನೆನ್ನ ಗಂಟಲಲಿ॥ ೨೪

ಜಲಧಿಯಲಿ ಫಣಿವದನದಲಿ ರಿಪು
ಬಲದ ಮುಖದಲಿ ಸಿಡಿಲ ಹೊಯ್ಲಲಿ
ಹಳುವದಲಿ ಗಿರಿಶಿಖರದಲಿ ದಾವಾಗ್ನಿ ಮಧ್ಯದಲಿ।
ಸಿಲುಕಿದಡೆ ಬಿಡಿಸುವವಲೇ ಪ್ರತಿ
ಫಲಿತ [4]ಪೂರ್ವಾರ್ದತ್ತ[4] ಪುಣ್ಯಾ
ವಳಿಗಳೆಂಬುದು ತನ್ನೊಳಾದುದು ಭೂಪ ಕೇಳೆಂದ॥ ೨೫

---

[1] ನೀ ಮೇಲ್ವಾಗಿನಾಹವ (ಕ), ನೀಗಿಸಮೇಗಣಾಹವ (ಖ), ಮೇಲಣ ಲಾಗಿನಾಹವ (ಫ). [2] ಶಂ (ಟ). [3] ಚಾಪಳಚಪೇಟಪದ (ಕ), ಕೈಚಳಕದಲಿ ಸೇನಾ (ಗ), ಚಾತುರ್ಯಪೀಠಪದ (ಫ.ತ), ಚತುರೋಪಪವಮಾನ (ಟ). [4] ಪೂರ್ವಾರ್ಜಿತದ (ಗ ಫ.ಟ).

ಆವ ವಹಿಲದೊಳಾದು[1]ದಾವಿ
ಭಾರ್ಗವ[1]ವೆಂದಾನಱಿಯೆನಾಗಳೆ
ದೇವಮುನಿಯಡ್ಡೈಸಿ ಹಿಡಿದನು ಕೊರಳಡಾಯುಧವ।
ಸಾವು ತಪ್ಪಿತು ಬಾದರಾಯಣ
ನೋವಿ ಕೃಪೆಯಲಿ ಮೈದಡವಿ ಸಂ
ಭಾವಿಸುತ ಕುರುಪತಿಯನಱಿಸೆಂದೆನಗೆ ನೇಮಿಸಿದ॥ ೨೬

ಬೀಳುಕೊಂಡೆನು ಮುನಿಯನವನೀ
ಪಾಲಕನನಱಿಸಿದೆನು ಕಳನೊಳು
ನಾಲ ಹೆಣನೊಟ್ಟಿಲ ಕಬಂಧದ ರುಧಿರಪೂರದಲಿ।
ಬೀಳುತೇಳುತ ನಿಲುತ ಬಳಲಿದು
ಕಾಲ್ನಡೆಯಲಿ ಸುಳಿವ ಕುರುಭೂ
ಪಾಲಕನ ಕಂಡೊಡನೆ ಬಂದೆನು ಕೊಳನ ತಡಿಗಾಗಿ॥ ೨೭

ಇಳಿದು ಸರಸಿಯ ಮಧ್ಯದಲಿ ನೃಪ
ತಿಲಕ [2]ನಿಂದನು[2] ಪಾಳೆಯವ ನೀ
ಕಳುಹು ಗಜಪುರಿಗೆನಲು ಬಂದೆನು ಪಥದ ಮಧ್ಯದಲಿ।
ಸುಳಿವ ಕಂಡೆನು ಕೃಪನನಾ ಗುರು
ಗಳ ಮಗನ ಕೃತವರ್ಮಕನನಂ
ದುಳಿದ ಮೂವರ ಕಳುಹಿದೆನು ಕುರುಪತಿಯ ಹೊರೆಗಾಗಿ॥ ೨೮

ತಂದೆನಿಲ್ಲಿಗೆ ಸಕಲ ನಾರೀ
ವೃಂದವನು ಕುರುಪತಿಯ ನೇಮದ
ಲಿಂದಿನೀ ವೃತ್ತಾಂತ [3]ವರ್ತಿಸಿ[3]ತಿಲ್ಲಿ ಪರಿಯಂತ।
ಮುಂದೆ ಹೇಳುವುದೇನು ನೀ ಬೆಸ
ಸೆಂದಡವನೀಪತಿಯ ಹೊರೆಗೈ
ತಂದನೇ ಗುರುಸೂನು ಮೇಲಣ ಹದನ ಹೇಳೆಂದ॥ ೨೯

ಅರಸ ಕೇಳ್ ಕೃಪ ಗುರುಜ ಕೃತವ
ರ್ಮರು ರಥಾಶ್ವಂಗಳನು ದೂರದ
ಲಿರಿಸಿ ತಲೆಮುಸುಕಿನಲಿ ಬಂದರು ಕೊಳನ ತಡಿಗಾಗಿ।

---

[1] ದ್ರೋನಿರ್ವಾಹ (ಘ). [2] ನುಡಿದನು (ಖ,ತ). [3] ಪಸರಿಸಿ (ಕ).

ತರುಲತೆಗಳೊಳಬಿನಲಿ [1]ಕಂಜಾ
ಕರದ ತಡಿಯಲಿ[1] ನಿಂದು ಮೆಲ್ಲನೆ
ಕರೆದು ಕೇಳಿಸಿ ಹೇಳಿದರ ತಂತಮ್ಮ ಹೆಸರುಗಳ॥ ೩೦

ಬದುಕಿ ಬಂದಿರೆ ಭೀಮ ನಿಮ್ಮನು
ಗದೆಯ ಸವಿಗಾಣಿಸನಲಾ ಸಾ
ಕಿದನ ಸಮಯಕೆ ಸುಳಿದಿರೈ [2]ಸಾಹಿತ್ಯ[2]ರೇಖೆಯಲಿ।
ಕದನದಲಿ ಸೌಬಲ ಸುಶರ್ಮರ
ಹೊದಱ ಹರೆಗಡಿವಲ್ಲಿ ನೀವ್ ಮಾ
ಡಿದ ಪರಾಕ್ರಮವಾವುದೆಂದನು ನೃಪತಿ ಖಾತಿಯಲಿ॥ ೩೧

ಜೀಯ ಖತಿಯೇಕೆಮ್ಮೊಡನೆ ಚ
ಕ್ರಾಯುಧನ ಚಾತುರ್ಯದಲಿ ರಣ
ದಾಯತಪ್ಪಿತು ಭಟರು [3]ಬೀತುದು[3] ಹೇಳಲೇನದನು।
ಕಾಯಿದರೊ ಕಾದಿದರೊ ಗುರು ಗಾಂ
ಗೇಯ ಸೈಂಧವ ಮಾದ್ರಪತಿ ರಾ
ಧೇಯರನುಗತವಾಗದಿಹುದಪರಾಧ [4]ನಮಗೆಂದ[4] ॥ ೩೨

ಅರಸ ಹೊಱವಡು ಭೀಮಪಾರ್ಥರ
ಕರುಳ ಬೀಯವ ಭೂತ[5]ನಿಕರಕೆ[5]
ಬರಿಸುವೆವು ನೀ ನೋಡಲೊಡ್ಡುವೆವಸ್ತ್ರಸಂತತಿಯ।
ಗರುವರಿಹರೇ ನೀರೊಳಾ ಹಿಮ
ಕರ ಮಹಾನ್ವಯ ಕೀರ್ತಿ ಜಲದೊಳು
ಕರಗದಿಹುದೇ ಕಷ್ಟವೃತ್ತಿಯದೆಂದರವನಿಪನ॥ ೩೩

ಏಳು ಕುರುಪತಿ ಪಾಂಡುತನಯ
ವ್ಯಾಳಸೇನೆಗೆ ಸಿಂಹವಿದೆ ನಿ
ನ್ನಾಳ ಬಿಡು ನೀ ನೋಡುತಿರು ಕರ್ಣಾದಿ ಸುಭಟರಲಿ।
ಜಾಳಿಸಿದ ಜಯಕಾಮಿನಿಯ ಜಂ
ಘಾಳತನವನು ನಿಲಿಸಿ ನಿನ್ನಯ
ತೋಳಿನಲಿ ತೋಱುವೆವು ಮೈದೋಱೆಂದರವನಿಪನ॥ ೩೪

[1] ಕುಂಜಾಕರದಳೊಯ್ಯನೆ (ಕ). [2] ಸಾಹಸಿಗ (ಖ). [3] ಬಿದ್ದರು (ಕ.ಖ.ಟ). [4] ವುಂಟೆಂದ (ಕ). [5] ಬಳಗಕೆ (ಟ.ದ).

ಒಪ್ಪದಿದು ಭೀಷ್ಮಾದಿಯವ್ವನ
ದರ್ಪದಲಿ ಜಾಱಿದ ಜಯಾಂಗನೆ
ಮುಪ್ಪಿನಲಿ ನಮಗೊಲಿವುದರಿದೇಕಾಕಿಯಾದೆವಲೆ।
ತಪ್ಪಿದುದನೀ ಸಲಿಲವಾಸದೊ
ಳೊಪ್ಪವಿಡುವೆನು ನಾಳೆ ನೀವ್ ತೊಲ
ಗಿಪ್ಪದಿಂದಿನೊಳೆಂದನವನಿಪನಾ ಕೃಪಾದಿಗಳ॥ ೩೫

ಇವೆ ಮಹಾಮಂತ್ರಾಸ್ತ್ರಸಂತತಿ
ಯಿವೆ ಮಹಾಧನುರಾ[1]ಜ್ಯ[1]ಸತ್ಕೃತಿ
ಸವನ ಸಾಪೇಕ್ಷಂಗಳಿವೆ ತ್ರೈರಥಿಕರೊಬ್ಬರಲಿ।
ಅವನಿಪತಿ ನೀ ಸೇಸೆದಳಿ ಮಿ
ಕ್ಕವರು ಸೇನೆ ವಿರೋಧಿವರ್ಗಕೆ
ದಿವವೊ ಧರೆಯೋ ನೋಡಲಹುದೇಳೆಂದನಾ ದ್ರೌಣಿ॥ ೩೬

ಸೇಸೆದಳಿದೆನು ಭೀಷ್ಮಗಗ್ಗದ
ಭಾಷೆ ನಿಮ್ಮಯ್ಯನಲಿ ಗತವಾ
ಯ್ತೀಸ ಪತಿಕರಿಸಿದೆನು ಕರ್ಣನ[2]ನಂದು ನೀನಱಿಯ[2]।
ಓಸರಿಸಿದನೆ ಮಾದ್ರಪತಿ ಬಳಿ
ಕೀಸು ಬಂದುದು ದೈವದೊಲಹಿನ
ಪೈಸರಕೆ ನೀವೇನ ಮಾಡುವಿರೆಂದನಾ ಭೂಪ॥ ೩೭

ರಣದೊಳಾ ಗಾಂಗೇಯಗಿಮ್ಮಡಿ
ಗುಣವ ತೋಱುವೆನಪ್ಪನವರಿಂ
ದೆಣಿಸಿಕೊಳು ಮೂವಡಿಯನಗ್ಗದ ಸೂತನಂದನನ।
ರಣಕೆ ನಾಲ್ವಡಿ ಮಾದ್ರರಾಜನ
ಹೊಣಕೆಗೈದು ಸುಶರ್ಮ [3]ಶಕುನಿಗ
ಳೆಣಿಸುವಡೆ ಪಾಡಲ್ಲ[3] ನೋಡೇಳೆಂದನಾ ದ್ರೌಣಿ॥ ೩೮

ಖರೆಯರೈ ನೀವುಭಯ ರಾಯರ
ಗುರುಗಳೆದು ಕುಂದಿಲ್ಲ ಕೃಪನೇ
ಹಿರಿಯನಾಚಾರಿಯನು ಯಾದವರೊಳಗೆ ಕೃತವರ್ಮ।

---

[1] ಜ (ಸ.ಖ). [2] ನಿಮ್ಮ ಮನವಱಿಯೆ (ಕ). [3] ಶಕುನಿಯ ಬಣಗುಗಳ ಸಮವಲ್ಲ (ಘ.ತ.)

ಗರುವ[1]ರೈ[1] ನೀವಿಲ್ಲಿ ರಣಬಾ
ಹಿರರೆ ಸಾಕಂತಿರಲಿ ಸುಕೃತದೊ
ಳರಗೆಲಸಿಗಳು ನಾವೆ ನಿಮ್ಮಲಿ ಕೊಱತೆಯಿಲ್ಲೆಂದ॥ ೩೯

ಅರಸ [2]ಕೇಳ್ಕೈ[2] ಸುಕೃತವನು ವಿ
ಸ್ತರಿಸುವೆನು ಪೂರಾಯವೆನೆ ಕಾ
ಹುರದ ನುಡಿ ಬೇಡೇಳು ನಡೆವುದು ಹಸ್ತಿನಾಪುರಿಗೆ।
ಅರಿಗಳ್ಕೈತಂದೌಕಿದಡೆ ಗಜ
ಪುರದ ದುರ್ಗವ ಬಲಿದು ನಿಲುವುದು
ಪರಮಮಂತ್ರವಿದೆಂದನಶ್ವತ್ಥಾಮನವನಿಪನ॥ ೪೦

ಸಲಿಲಮಧ್ಯದೊಳಿಂದಿನಿರುಳನು
ಕಳೆದೆನಾದಡೆ ಪಾಂಡುಪುತ್ರರ
ಗೆಲುವೆನುದಯದೊಳಿದುವೆ ನಿಶ್ಚಯವೆನ್ನ ಚಿತ್ತದಲಿ।
ಅಳುಕಿ ಕದನದೊಳೋಡಿ ನಗರಿಯ
ಲಲನೆಯರ ಮಱೆಗೊಂಬೆನೇ ನೀವ್
ತೊಲಗಿ ಭೀಮನ ಬೇಹು ಬಹುದಿರಬೇಡ ನೀವೆಂದ॥ ೪೧

ಅರಸ ಕೇಳ್ಕೈ ದೈವಯೋಗವ
ಪರಿಹರಿಸಲಾರಳವು ಪವನಜ
ನರಮನೆಯ ಮೃಗವೇಂಟೆಕಾಱರು ಮಾಂಸಭಾರದಲಿ।
ಬರುತ ನೀರಡಿಸಿದರು ಕಂಡರು
ಸರಸಿಯನು ನೀರ್ಗುಡಿಯಲೈತಂ
ದಿರಿಸಿದರು ತೀರದಲಿ ಬಹಳಾಮಿಷದ ಕಂಬಿಗಳ॥ ೪೨

ಚರಣ ವದನವ ತೊಳೆದು ನಿರ್ಮಳ
ತರವರಾಂಬುವನೀಂಟಿದರು ಕೃಪ
ಗುರುಸುತರ ನುಡಿಗಳನು ನಡುನೀರಲಿ ನೃಪಧ್ವನಿಯ।
ಅಱಿದರಿವರಾಲಿಸಿದರೇನಿದು
ಕುರುಪತಿಯ ತತ್ಸುಭಟವಾದೋ
ತ್ತರವಲಾ ಲೇಸಾಯ್ತೆನುತ ಕೇಳಿದರ ಮಱೆವಿಡಿದು॥ ೪೩

[1] ರಹ (ಕ). [2] ಕೇಳ್ವರೆ (ಷ.ತ).

ಆಯಿತಿದು ನೃಪರಾಜಕಾರ್ಯದ
ದಾಯಕಿದು ಧುರ[1]ಪಥ[1]ವಲಾ ಕುರು
ರಾಯಗುಪ್ತನಿವಾಸವರ್ಥಪ್ರದವಲಾ ನಮಗೆ।
ಕಾಯಿದಿರು ಕಂಡೌ ಸರೋಜದ
ತಾಯಿ ಸರಸಿಯೆನುತ್ತ ಹೋದರು
ವಾಯುತನುಜನ ಬೇಂಟೆಕಾಱರು ನಗುತ ಪಾಳೆಯಕೆ॥ ೪೪

ಅರಸ ಕೇಳ್ ಸಮಸಪ್ತಕರ ಸಂ
ಹರಿಸಿ ಶಕುನಿಯ ಮುಱಿದು [2]ಕಳ[2]ನಲಿ
ದೊರೆಯ ಕಾಣದೆ ಭೀಮಸೇನಾರ್ಜುನರು ದುಗುಡದಲಿ।
ಹರಿಸಿದರು ದೂತರನು ಕೌರವ
ಧರಣಿಪನ ಪಾಳೆಯಕೆ ಹಸ್ತಿನ
ಪುರಿಗೆ ಕೂಡೆ ದಿಗಂತದಲಿ ಚರರಱಸಿದರು ನೃಪನ॥ ೪೫

ಹರಿದು ದೂತರು ನೃಪನ ಕಾಣದೆ
ಮರಳಿದರು ಯಮಸೂನು ದುಗುಡದ
ಭರದ [3]ಭಾರವಣಿ[3]ಯಲಿ ಹೊಕ್ಕನು ತನ್ನ ಪಾಳೆಯವ।
ಕುರುನೃಪತಿ ತಪ್ಪಿದನು ಭೀ[4]ಷ್ಮಾ[4]
ದ್ಯರ ವಿಜಯ ವೃಥೆಯಾಯ್ತು ಹಸ್ತಿನ
ಪುರದ ಸಿರಿ ಜಾಱಿದಳು ತನಗೆಂದರಸ ಬಿಸುಸುಯ್ದ॥ ೪೬

ಹೆಣನ ಬಗಿದಱಸಿದರು ಕರಿಗಳ
ಹಣಿದದಲಿ ನೋಡಿದರು ರಥಸಂ
ದಣಿಗಳೊಟ್ಟಿಲ ಕೆದಱಿ ಭೀಷ್ಮನ ಸರಳ ಮಂಚದಲಿ।
ಹಣುಗಿದರು ಭಗದತ್ತನಾನೆಯ
ನಣೆದುನೋಡಿದರರುಣವಾರಿಯ
ಕೆಣಕಿ ಕೂಡಱಸಿದರು ಚಾರರು ಕಳನ ಚೌಕದಲಿ॥ ೪೭

ಹರಿಹರಿದು ಕೂಡಱಸಿ ದೂತರು
ಮರಳಿ ಬಂದರು ದುಗುಡಭರದಲಿ
ಬೆರಳ ಮೂಗಿನಲಿದ್ದುದವನಿಪಸಹಿತ ಪರಿವಾರ।

[1] ಫಲ (ಕ), ಪದ (ಘ.ತ). [2] ದಳ (ಖ.ಘ.ತ). [3] ಭರವಣಿಗೆ (ಕ).
[4] ಮಾ (ಕ).

ಇರುಳು ಬೇಗೆಯು ಚಕ್ರವಾಕಕೆ
ತರಣಿ ತಲೆದೋಱಿದವೊಲ[1]ಟವೀ
ಚರರಿಗರಸಗೆ ಭಾವಭಾವ ವ್ಯಕ್ತವಾಯ್ತೆಂದ[1]॥ ೪೮

ತಂದ ಮಾಂಸದ ಕಂಬಿಗಳನು ಪು
ಳಿಂದರೊಪ್ಪಿಸಿ ಭೀಮಸೇನನ
ಮಂದಿರವ ಸಾರಿದರು ಕಂಡರು ಜನದ ಕಳಕಳವ।
ಇಂದಿನೀ ಸಂಗ್ರಾಮಜಯದಲಿ
ಬಂದ ಜಾಡ್ಯವಿದೇನು ಬಿನ್ನಹ
ವೆಂದು ಸಲುಗೆಯ ಶಬರಪತಿ ನುಡಿಸಿದನು ಪವನಜನ॥ ೪೯

ರಣಮುಖದೊಳೇಕಾದ[2][ಶಾ][2]ಕ್ಷೋ
ಹಿಣಿಯ ಗೆಲಿದುದು ವಿಫಲವಾದುದು
ಜುಣುಗಿದರಿನೃಪನಾವ ಜವನಿಕೆ ಮಱೆಯೊಳಡಗಿದನೊ।
ತೃಣವನದೊಳಿಱುಬಿನಲಿ ಮೆಳೆಸಂ
ದಣಿಗಳಲಿ ಮರಗಾಡಿನಲಿ ಮೃಗ
ಗಣದ ನೆಲೆಯಲಿ ಕಾಣಿರಲೆ ನೀವೆಂದನಾ ಭೀಮ॥ ೫೦

ಆದರೆಕ್ಕಟಿ ಬಿನ್ನಹವ ನೀ
ವಾದರಿಪುದೆನೆ ತುಷ್ಟನಾಗಿ ವೃ
ಕೋದರನು ಕರಸಿದನು ಪರಿಮಿತಕಾ ಪುಳಿಂದಕರ।
ಆದುದೇ ನೆಲೆ ಕುರುಪತಿಗೆ ದು
ರ್ಭೇದ[3]ವಿದು ಮೆಚ್ಚುಂಟು[3] ನಿಮಗೆನ
ಲಾ ದುರಾತ್ಮಕರಱುಹಿದರು ಧೃತರಾಷ್ಟ್ರ ಕೇಳೆಂದ॥ ೫೧

ಜೀಯ ಕುರುಪತಿ ಗುಪ್ತದಲಿ ದ್ವೈ
ಪಾಯನನ ಸರಸಿಯಲಿ ಸಮರವಿ
ಧಾಯಕದ ವಾರ್ತೆಯನು ತನ್ನವರೊಡನೆ ತೀರದಲಿ।
ಬಾಯಿಗೇಳಿಸು[4]ತಿರ್ದ ನಾವ್ ತ
ತ್ತೋ[4]ಯಪಾನಕೆ ತಿರುಗಿ ಕಂಡೆವು
ರಾಯನಂಘ್ರಿಗಳಾಣೆಯೆಂದರು ಶಬರರನಿಲಜಗೆ॥ ೫೨

---

[1] ಡವೀಚರರು ಬಂದರು ಭೀಮಸೇನನ ಶಿಬಿರಮಂದಿರಕೆ (ಖ), ಟವೀರರಥ ಸದ ಭಂಗಿ ಭಾವವೆ ಚಿತ್ರವಾಯ್ತೆಂದ (ಟ.ದ). [2] ಶ (ಸ). [3] ವಿದಱೆಚ್ಚಱಿಕೆ (ಕ), ವಿಧಿವಶನಿಮಗೆ (ಖ.ಟ). [4] ತಿರ್ದಡಾನಾವ್ತೋ (ಘ.ತ), ತಿರಲುನಾವಾತೋ (ಖ).

ಇತ್ತನವದಿರಿಗಂಗಚಿತ್ತವ
ನುತ್ತಮಾಂಬರ [1]ವೀರನೂಪುರ[1]
ಮುತ್ತಿನೇಕಾವಳಿಯ ಕರ್ಣಾಭರಣ ಮುದ್ರಿಕೆಯ।
ಹೊತ್ತ ಹರುಷದ ಹೊಳೆವ ಕಂಗಳ
ತೆತ್ತಿಸಿದ ಪುಳಕದ ಸಘಾಡಿಕೆ
ವೆ[2]ತ್ತ[2] ಸುಮ್ಮಾನದಲಿ ಬಂದನು ರಾಯನರಮನೆಗೆ॥ ೫೩

ಗುಡಿಯ ಕಟ್ಟಿಸು ಜೀಯ ಚರರಿಗೆ
ಕೊಡು ಪಸಾಯವನರಿನೃಪನ ತಲೆ
ವಿಡಿದರಾ ದ್ವೈಪಾಯನ ಸರೋವರದ ಮಧ್ಯದಲಿ।
ಅಡಗಿದನು ತಡಿವಿಡಿದು [3]ನಿಂದ[3]ವ
ರೊಡನೆ ಮಾತಾಡಿದನು ಗಡ ನಿ
ಮ್ಮಡಿಯೆ ಬಲ್ಲರಿ ರಾಜಕಾರ್ಯವನೆಂದನಾ ಭೀಮ॥ ೫೪

ಕರೆ ಮುಕುಂದನನರ್ಜುನನ ಸಂ
ವರಣೆ ಬರಲಿ ಶಿಖಂಡಿ ಪಾಂಚಾ
ಲರಿಗೆ ನೇಮಿಸು ಕರಸು ಧೃಷ್ಟದ್ಯುಮ್ನ ಸೃಂಜಯರ।
ಕರಿ ತುರಗ ರಥವಿಶ್ರಮವನಿಂ
ದಿರು[4]ಳಿನಲಿ ನೂಕುವುದು[4] ಹೊಱವಡಿ
ಹೊಱವಡೆನೆ ನಿಸ್ಸಾಳ ಸೂಳವಿಸಿದವು ಲಗ್ಗೆಯಲಿ॥ ೫೫

ಅವರ ಸುಮ್ಮಾನವನು ಸೇನಾ
ನಿವಹ ರಭಸದ ಭೂರಿಭೇರಿಯ
ವಿವಿಧ ವಾದ್ಯಧ್ವನಿಯ ರಥಗಜಹಯದ ಗರ್ಜನೆಯ।
ಇವರು ಕೇಳಿದರಕಟಕಟ ಕೌ
ರವನ ಗುಪ್ತ ಪ್ರಕಟವಾದುದೆ
ಶಿವಶಿವಾ ಹರಿಸರ್ವಗತನ[5]ಹುದೆಂ[5]ದನಾ ದ್ರೌಣಿ॥ ೫೬

ಏಳು ಕುರುಪತಿ ಪಾಂಡುನಂದನ
ರಾಳು ಬರುತಿದೆ [6]ನಾವು[6] ನಾಲ್ವರು
ಕಾಳೆಗದೊಳಂಘೈಸುವೆವು ಬಿಡುಬಿಡು ಸರೋವರವ।

---

[1] ವಿವಿಧ ವಸ್ತುವ (ಕ). [2] ತ್ತು (ಪ). [3] ತನ್ನ (ಕ). [4] ಳುಮಾಡಲ ಬೇಗ (ಗ,ಟ.ಪ). [5] ಹನೆಂ (ಕ). [6] ನಮ್ಮ (ಕ).

ಹೇಳು ಮನವೇನೆನಲು ನೀವಿ
ನ್ನೇಳಿ ದೂರದಲಿರಿ ವಿರೋಧಿಗ
ಳಾಳು ಮಾಡುವುದೇನು ಸಲಿಲದೊಳೆಂದನಾ ಭೂಪ॥ ೫೭

ಅನಿಮಿಷರು ಗಂಧರ್ವ ಯಕ್ಷರು
ಮುನಿದು ಮಾಡುವುದೇನು ಮಾಯದ
ಮನುಜರಿಗೆ ತಾ ಸಾಧ್ಯವಹೆನೇ ತನ್ನನಱಿಯಿರಲಾ।
ವಿನುತ ಸಲಿಲಸ್ತಂಭವಿದ್ಯೆಯೊ
ಳೆನಗಿರವು ಪಾತಾಳದಲಿ ಯಮ
ತನುಜನೇಗುವ ರೂಹುದೋ[1]ಱದೆ[1] ಹೋಗಿ ನೀವೆಂದ ॥ ೫೮

ಉರವಣಿಸಿತರಿಸೇನೆ ಮುತ್ತಿತು
ಸರಸಿಯನು ವೇಢೆಯಲಿ ಗಿಡು ಮೆಳೆ
ತೆರುಲತೆಯಲೊಳಕೊಂಡು ನಿಂದುದು ಚತುರಚತುರಂಗ।
ನರರ ಗರ್ಜನೆ ವಾದ್ಯರವ ಕರಿ
ತುರಗ ರಥ ನಿರ್ಘೋಷ ಪರ್ವತ
ಬಿರಿಯೆ ಮೊಳಗಿತು ಸಿಲುಕಿದನು ಸಿಲುಕಿದನು ಹಗೆಯೆನುತ॥ ೫೯

ಇವರು ತಿರುಗಿದರಿನ್ನು ದೈವ
ವ್ಯವಸಿತವೆ ಫಲಿಸುವುದಲಾ ಕೌ
ರವನ ಸಿರಿ ಪಣ್ಯಾಂಗನಾವಿಭ್ರಮವ ವರಿಸಿತಲಾ।
ಅವರಿಗಿದನಾರಱುಹಿದರೊ ಪಾಂ
ಡವರಿಗಾವುದು ಕೊಱತೆ ಪುಣ್ಯ
ಪ್ರವರ ಗದುಗಿನ ವೀರನಾರಾಯಣನ ಕರುಣದಲಿ॥ ೬೦

ನಾಲ್ಕನೆಯ ಸಂಧಿ ಮುಗಿದುದು.

---

[1] ಱನು (ಪು.ತ).

# ಐದನೆಯ ಸಂಧಿ

---

**ಸೂಚನೆ** ಮುತ್ತಿ ಮೊದಲಿಸಿದರು ಕುರುರಾ
ಜೋತ್ತಮನನುದಕದಲಿ ಹೊಱವಡಿ
ಸುತ್ತ ಕಂಡರು ಪಾಂಡುತನುಜರು ರೋಹಿಣೀಸುತನ ||

ಕೇಳು ಧೃತರಾಷ್ಟ್ರಾವನಿಪ ರಿಪು
ಜಾಲ ಜಡಿದುದು ಕೊಳನ ತಡಿಯಲಿ
ತೂಳಿದುದು ಬಲುಬೊಬ್ಬೆಯಬ್ಬರವಭ್ರಮಂಡಲವ |
ಸೂಳವಿಸಿದವು ಲಗ್ಗೆಯಲಿ ನಿ
ಸ್ಸಾಳ ಬಹುವಿಧ ವಾದ್ಯರವ ಹೆ
ಗ್ಗಾಳೆಗಳು ಚೀಱಿದವು ಬೈಸಿಕೆ ಬಿಡೆ ಕುಲಾದ್ರಿಗಳ || ೧

ತಳಮುಳಲ ಮೊಗೆಮೊಗೆದು ಕದಡಿತು
ಕೊಳನ ಜಲಚರನಿಚಯ[1]ವೀ ಬೊ
ಬ್ಬುಳಿಕೆ ಮಿಗಲೊಬ್ಬುಳಿಕೆ ನೆಗೆದವು ವಿಗತವೈರದಲಿ[1] |
ದಳವ ಬಿಗಿದಂಬುಜದೊ[2]ಳಡಗಿದ[2]
ವಳಿನಿಕರ ಹಾಱಿದವು ಹಂಸಾ
ವಳಿ ಜವಾಯಿಲತನದಿ ಜಗುಳ್ದವು ಜಕ್ಕವಕ್ಕಿಗಳು || ೨

ಬಂದುದರಿಬಲ ಕೊಳನ ತೀರದ
ಲಂದು ವೇಢೈಸಿದರು ಸರಸಿಯ
ಬಂದಿಕಾಱರು ಬೊಬ್ಬಿಱಿದರಬ್ಬರಕೆ ಧರೆ ಬಿರಿಯೆ |
ಅಂದಣದಲೈತಂದು ಧರ್ಮಜ
ನಿಂದನರ್ಜುನ ಭೀಮ ಯಮಳ ಮು
ಕುಂದ ಸಾತ್ಯಕಿ ದ್ರುಪದಸೂನು ಶಿಖಂಡಿಗಳು ಸಹಿತ || ೩

---

[1] ದಲಿ ಬೊಬ್ಬುಳಿಕೆ ನೆಗೆದುವು ಘುಳುಘುಳಿಸಿದವು ವಿಗತವೈರದಲಿ (ಕ), ಚರದೊಬ್ಬುಳಿಗೆ ಸಾರಿತು ಬಹಳ ವಾದ್ಯದ ವಿಗತ ವೈರದಲಿ (ಖ), ಲೀ ಬೊಬ್ಬುಳಿಕೆ ನೆಗೆದುದು ವಿಗತವೈರದಲಿ (ಘ), ದಲಿ ಬೊಬ್ಬುಳಿಕೆ ಮಿಗೆಯೊಬ್ಬುಳಿಗೆ ನೆರೆದವು ಝುಳದ ಹೊಯ್ಲಿನಲಿ (ಟ.ದ), ದಲಿ ಬೊಬ್ಬುಳಿಕೆ ನೆಗೆದವು ಘುಳುಘುಳಿಸಿದವು ಬೆದಱಿ ಹೊಯ್ಲಿನಲಿ (ಪ). [2] ಳೌಕುವ (ಕ).

ವರ ಯುಧಾಮನ್ಯೂತ್ತಮೌಂಜಸ
ರಿರಲು ಪಂಚದ್ರೌಪದೀಸುತ
ರರಸ ನಿಮ್ಮ ಯುಯುತ್ಸು ಸೃಂಜಯ ಸೋಮಕಾದಿಗಳು|
ಕರಿಗಳೈನೂಱೈದು ಸಾವಿರ
ತುರಗಪಯದಳವೆಂಟು ಸಾವಿರ
ವೆರಡು ಸಾವಿರ ರಥವಿದರಿವೋಹರದ ಪರಿಶೇಷ॥ ೪

ದೇವ ಕಂಡಿರೆ ಕುರುಪತಿಯು ಮಾ
ಯಾವಿಡಂಬನವಿದ್ಯೆಯನು [1]ಷ್ಠಿ
ಷ್ಠೀ[1]ವನಾ[2]ವಿ[2]ರ್ಭೂತ ಸಲಿಲಸ್ತಂಭ ಡಂಬರವ|
ಆವುದಿಲ್ಲಿಯು ವಿಧಿಯು ಸಮರ
ವ್ಯಾವಹಾರಿಕ ವಿಷಯು ತಪ್ಪದೆ
ನೀವು ಬೆಸಸುವುದೆಂದನರಸನು ದೇವಕೀಸುತನ॥ ೫

ಭರತವಂಶಲಲಾಮ ಕೇಳ್ ನೃಪ
ವರರ ಪದ್ಧತಿ ಕಂಟಕದಿನು
ತ್ತರಿಸುವುದು ಕಂಟಕವ ಮಾಯಾವಿಗಳ ವಿದ್ಯೆಗಳ|
ಪರಿಹರಿಸುವುದು ಮಾಯೆ[3]ಯಿಂ[3] ಪ್ರತಿ
ಗರಳದಲಿ ಗರಳವನು ಮಾಯಾ
ಪರರು ಮಾಯೋಪಾಯುವಧ್ಯರು ಭೂಪ ಕೇಳೆಂದ॥ ೬

ಮರಣವೆಂದಿಂಗಾಗದಂತಿರೆ
ವರವ ಕೊಂಡು ಹಿರಣ್ಯಕಾ[4]ಸುರ[4]
ಸುರನರೋರಗರನು ವಿಭಾಡಿಸಿ ಧರ್ಮಪದ್ಧತಿ[5]ಗೆ[5] |
ಧರಧುರವ ಮಾಡಿದಡೆ ನರಕೇ
ಸರಿಯು ರೂಪಿನೊಳಾದಿವಿಶ್ವಂ
ಭರನು ಗೆಲಿದನು ಮಾಯೆಯನು ಮಾಯಾಭಿಯೋಗದಲಿ॥ ೭

ಲಲಿತ ವೈದಿಕ ಧರ್ಮಮಾರ್ಗವ
ನಳಿದು ಹೆಚ್ಚಿದ ಕಾಲನೇಮಿಯ
ತಲೆಯ ಕೊಂಡನು ಚಕ್ರದಲಿ ದೈತ್ಯಾರಿ ಪೂರ್ವದಲಿ|

[1] ವಿಶ್ವಾ (ಘ). [2] ನಿ (ಕ). [3] ಯಲಿ (ಕ). [4] ಕ್ಷನು (ಖ ಗ.ತ).
[5] ಯ (ಕ).

ಬಲನ ಜಂಭನ ವೃತ್ರನನು ಶ್ರಂ
ಖಳಿತ ಮಾಯರ ಮಾಯೆಯಿಂದವೆ
ಬಲವಿರೋಧಿ ವಿಭಾಡಿಸಿದನವನೀಶ ಕೇಳೆಂದ॥ ೮

ಹರನ ವರದಲಿ ಹೆಚ್ಚಿ ಭಸ್ಮಾ
ಸುರನು ಶಿವನ [1]ವಿರೋಧಿಸಿದ[1]ನು
ಬ್ಬರದವನ[2]ನುರುಹಿ[2]ದನು ಹರಿ ಮಾಯಾಪ್ರಯೋಗದಲಿ।
ಸುರರನಱೆಯಾಳಿದನು ಭುವನವ
ನೊಱಲಿಸಿದ ರಾವಣನ ರೂಢಿಯ
ಶಿರವ ನರರೂಪಿನಲಿ ಖತಿಯಲಿ ರಾಮು ಖಂಡಿಸಿದ॥ ೯

ಎಮಗೆ ತಾಯೊಡಹುಟ್ಟಿದನು ನಿ
ರ್ಮಮತೆಯಲಿ ನಿರ್ದಾಟಿಸಿದನಾ
ಕ್ರಮದಲೇ ಕಂಸಂಗೆ ಹಿಂಸಾಕೃತಿಯ ರಚಿಸಿದೆವು।
ಸಮರದೊಳಗೆ ಸೃಗಾಲನೃಪನಾ
ಕ್ರಮಿಸಿದನು ಠಕ್ಕಿನಲಿ ಮಾಯಾ
ತಿಮಿರವನು ಮಾಯೆಯಲಿ ಗೆಲಿದೆವು ಭೂಪ ಕೇಳೆಂದ॥ ೧೦

ಕಾಲಯವನನ ದಂತವಕ್ರನ
ಸಾಲುವನ ಮಾಗಧನ ನರಕನ
ಸೀಳಿದೆವು ಕೃತಮಾಯುರನು ಮಾಯಾ[3]ಪ್ರಪಂಚ[3]ದಲಿ।
ಥಾಳರನು ಧವಳರನು ಠಕ್ಕಿನ
ಠೌಳಿಕಾಱರನವರ ವಿದ್ಯೆ[4]ಯ[4]
ಲಾಳಿಗೊಂಡಡೆ ದೋಷವಿಲ್ಲವನೀಶ ಕೇಳೆಂದ॥ ೧೧

ದ್ಯೂತ ಮೃಗಯಾವ್ಯಸನವಿವು ನೃಪ
ಜಾತಿಗಾದ ವಿನೋದ ಕಪಟ
ದ್ಯೂತವಿದು ನೃಪಧರ್ಮವೇ ಮಾಯಾ[5]ಭಿ[5]ಯೋಗ[6]ದಲಿ[6]।
ಸೋತಿರಿಳೆಯನದಂತಿರಲಿ ನಿ
ರ್ಭೀತಿಯಲಿ ನಿಮ್ಮರಸಿಯುಟ್ಟುದ
ನೀತ ಸುಲಿಸಿದನಿವನು ಸುಜನನೆ ಭೂಪ ಹೇಳೆಂದ॥ ೧೨

---

[1] ವಿಭಾಡಿಸಿದ (ಖ). [2] ಮಡುಹಿ (ಖ.ಘ.ತ). [3] ವಿರೂಪ (ಘ.ತ). ಪ್ರಯೋಗ (ಟ.ಪ). [4] ವ (ಟ.ದ). [5] ಪ್ರ (ಕ). [6] ವಲಾ (ಕ.ತ).

ಐಹಿಕದ ಸಂಭಾವನೆಯ ಸ
ಮ್ಮೋಹನಕೆ ಮರುಳಾಗಿ ಸುಕೃತ
[1]ದ್ರೋಹವಾಗದಲೇ ಸುಯೋಧನವಧೆಯ ದೆಸೆಯಿಂದ[1]।
ಈ ಹದನ ಬಿನ್ನೈಸಿದೆವು ನೀ
ವಾಹವಕೆ ಧರ್ಮಾರ್ಥಶಾಸ್ತ್ರವ
ನೂಹಿಸಿದಿರೆಂದರಸ ನುಡಿಸಿದನಿತ್ತ ಕುರುಪತಿಯ॥

ಏಳು ಕೌರವರಾಯ ಸಲಿಲ
ವ್ಯಾಳನೇ ನೀನಕಟ ಜಲದೊಳ
ಗಾಳುವರೆ [2]ಕಾ[2]ಳಾಯ್ತು ನಿನ್ನಲಿ ಗರುವ ಶಶಿವಂಶ।
ಕಾಳೆಗದೊಳದ್ದಿದೆ ಸಹೋದರ
ಜಾಲ ಪುತ್ರಜ್ಞಾತಿ ಬಂಧು ನೃ
ಪಾಲರನು ನೀ ನೀರೊಳಡಗಿದೆ ಕಷ್ಟ[3]ವಾಯ್ತೆಂದ[3]॥ ೧೪

ಜಾತಿಮಾತ್ರದಮೇಲೆ ಬಂದ
ಖ್ಯಾತಿವಿಖ್ಯಾತಿಗಳು ನಮಗೆ[4]ನೆ
ಜಾತರಾದೆವು ನಾವು ನಿರ್ಮಳ[4]ಸೋಮವಂಶದಲಿ।
ಭೀತಿಯಲಿ ನೀ ನೀರ ಹೊಕ್ಕಡೆ
ಮಾತು ತಾಗದೆ ತಮ್ಮನಕಟಾ
ಬೂತುಗಳ ಕೈಬಾಯ್ಗೆ ಬಂದೈ ತಂದೆ ಕುರುರಾಯ॥ ೧೫

ನಾಡೊಳರ್ಧವ ಕೊಡದೆ ಹೋದಡೆ
ಬೇಡಿದೈದೂರುಗಳ ಕೊಡುಯೆನ
ಲೇಡಿಸಿದಲೈ ಸೂಚಿಯಗ್ರಪ್ರಮಿತಧಾರುಣಿಯ।
ಕೂಡೆ ನೀ ಕೊಡೆನೆಂದು ದರ್ಪವ
ಮಾಡಿ ಸಕಲ ಮಹೀತಳವ ಹೋ
ಗಾಡಿ ಹೊಕ್ಕೈ ಜಲವನಾವೆಡೆ ನಿನ್ನ ಛಲವೆಂದ॥ ೧೬

---

[1] ದ್ರೋಹವನು ಮಾಡುವರೆಯಿಲ್ಲಿ ಸುಯೋಧನನ ವಧೆಗೆ (ಖ), ದಹಿಸವೇ ಮುರವೈರಿ ಸುಯೋಧನನ ವಧೆಯೊಳಗೆ (ಘ). [2] ಗಾ (ಕ). [3] ಹೋಗೆಂದ (ಕ). [4] ನಿಜಾತವಾದೆವು ನಾವು ನೀನೀ (ಖ), ನಿಜಾತರಾದೆವು ನಾವು ನಿರ್ಮಲ (ಚ.ದ), ನಿಜಾತಿರೋದರೆ ನಾವು ನಿರ್ಮಳ (ತ).

ಹೇಳಿದರಲಾ ಭೀಷ್ಮವಿದುರರು
ಮೇಲು[1]ದಾಯದ ತಾಗುಘಟ್ಟ[1]ನು
ಕೇಳದಖಿ[2][ಳಾ][2]ಕ್ಷೋಹಿಣಿಯ ಕ್ಷತ್ರಿಯರ ತಡೆಗಡಿಸಿ।
ಕಾಳೆಗದೊಳೊಟ್ಟೈಸಿ ನೀರೊಳು
ಬೀಳುವುದ ನಿನಗಾರು ಬುದ್ಧಿಯ
ಹೇಳಿದರು ನುಡಿ ನುಡಿ ಸುಯೋಧನ ಎಂದನಾ ಭೂಪ॥ ೧೭

ಕಂಡೆವಂದೊಬ್ಬನ ಪಲಾಯನ
ಪಂಡಿತನನುತ್ತರನನಾತನ
ಗಂಡ ನೀನಾದ್ಯೈ ಪಲಾಯನಸಿರಿಯ ಸೂಱೆಯಲಿ।
ಭಂಡಬರ್ಬಿರು ಭೂಮಿಪರೊಳಾ
ಭಂಡನಿಗೆ ನೀ ಮಿಗಿಲು ಸಲಿಲದ
ಕೊಂಡದಲಿ ಹೊಕ್ಕನೆ ವಿರಾಟಜನೆಂದನಾ ಭೂಪ॥ ೧೮

ಅಡವಿಯೇ ನೆಲೆ ಪಾಂಡುಸುತರಿಗೆ
ಕೊಡೆನು ಧರಣಿಯನೆಂದು ಖಡುಗವ
ಜಡಿದೆಲಾ ನಿನ್ನೋಲಗದ ನಾರಿಯರ ಸಮ್ಮುಖದಿ।
[3]ಖಡುಗವನು ಕಳನೊಳಗೆ ಹಾಯಿಕಿ[3]
ನಡುಗೊಳನ ನೀನೋಡಿ ಹೊಕ್ಕಡೆ
ಮಡದಿಯರು ತಮತಮಗೆ ನಗರೇ ಹೊಯ್ದು ಕರತಳವ॥ ೧೯

ಜೀವಸಖ ರಾಧೇಯನಾತನ
ಸಾವಿನಲಿ ನೀನುಳಿದೆ ಸೋದರ
ಮಾವ ಶಕುನಿಯ ಸೈಂಧವನ ದುಶ್ಶಾಸನಾದಿಗಳ।
ಸಾವಿನಲಿ ಹಿಂದುಳಿದ ಜೀವನ
ಜೀವನವೆ ಜೀವನನಿವಾಸವಿ
ದಾವ ಗರುವಿಕೆ ಕೊಳನ ಹೊಱವಡು ಕೈದುಗೊಳ್ಳೆಂದ॥* ೨೦

ಓಡಿ ಕೈದುವ ಹಾಯ್ಕಿ ಕಳನೊಳು
ಹೇಡಿಗರ ಹಿಡಿದಳುಕಿ ಒದುಕಿದ
ಗೂಡಿಹುದೆ ಗರುವಾಯಿಯಲಿ ಕಲ್ಪಾಂತಪರಿಯಂತ।

[1] ದಾಗಿನ ತಾಗುಬಾಗ (ಘ.ಟ) [2] ಳ (ಸ). [3] ನುಡಿದ ಭಾಷೆಯಲಂಪ್ಯ ವಾಗದೆ (ಖ). * ಈ ಪದ್ಯ (ಘ) ಪ್ರತಿಯಲ್ಲಿಲ್ಲ.

ಓಡಿ ಪಾತಾಳವನು ಹೊಕ್ಕಡೆ
ಕೂಡೆ ಸಾಧಿಸಿ ನಿನ್ನ ಬೇಂಟೆಯ
ನಾಡದಿಹ [1]ರಾವುಂಟೆ[1] ಕುರುಪತಿ ಕೈದುಗೊಳ್ಳೆಂದ॥ ೨೧

ಭರತ ನಹುಷ ಯಯಾತಿ ನಳ ಸಂ
[2]ವ[2]ರಣ ಸಗರ ದಿಳೀಪ ನೃ[3]ಗ[3] ರಘು
ವರ ಪುರೂರವ ಧುಂಧುಮಾರ ಭಗೀರಥಾದಿಗಳು।
ಧರಣಿಪಾಲರನಂತಸಮರದೊ
ಳರಿ[4]ಬಲವ[4] ಸವಱಿದರು ನಿನ್ನವೊ
ಲುರುಳಿದವ[5]ರಿಲ್ಲು[5]ದಕದಲಿ ನೃಪ ಕೈದುಗೊಳ್ಳೆಂದ॥ ೨೨

ಕೊಳನ ಬಿಡು ಕಾದೇಳು ಹಿಂದಣ
ಹಳಿವ ತೊಳೆ ಹೇರಾಳ ಬಾಂಧವ
ಬಳಗ ಭೂಮೀಶ್ವರರ ಬಹ[6][ಳಾ][6]ಕ್ಷೋಹಿಣೀದಳವ।
ಅಳಿದ ಕೀರ್ತಿಯ ಕೆಸಱ ತೊಳೆ ಭೂ
ವಳಯುವನನ್ಯನು ದೈನ್ಯವೃತ್ತಿಯ
ಬಳಸುವರೆ ಸುಡು ಮರುಳೆ ಕುರುಪತಿ ಕೈದುಗೊಳ್ಳೆಂದ॥ ೨೩

ವಿಷವನಿಕ್ಕಿದೆ ಹಾವಿನಲಿ ಬಂ
ಧಿಸಿದೆ ಮಡುವಿನೊಳಿಕ್ಕಿ ಬಳಿಕು
ಬ್ಬಸವ ಮಾಡಿದೆ ಹಿಂದೆ ಮಾನಮುನಿಸಾಗಿ ಬಾಲ್ಯದಲಿ।
ವಸತಿಯಲಿ ಬಳಿಕಗ್ನಿದೇವರ
ಪಸರಿಸಿದೆ ಪುಣ್ಯದಲಿ ನಾವ್ ಜೀ
ವಿಸಿದೆವಡಗಿದಡಿನ್ನು ಬಿಡುವೆನೆ ಯೆಂದನಾ ಭೀಮ॥ ೨೪

ಎಲವೊ ರಾಯನ ಪಟ್ಟದರಸಿಯ
ಸುಲಿಸಿದಾ ಛಲವೆಲ್ಲಿ ಹಗೆಗಳ
ಹಳುವದಲಿ ಹೊಗಿಸಿದೆನೆನಿಪ ಸುಮ್ಮಾನ ತಾನೆಲ್ಲಿ।
ಖಳ ಶಿರೋಮಣಿ ನಿನ್ನ ತಲೆಗೂ
ದಲಲಿ ಕೈಗಳ ಕಟ್ಟಿ ಖೇಚರ
ನೆಳೆಯೆ ಬಿಡಿಸಿದರಾರು ಕೌರವ ಎಂದನಾ ಭೀಮ॥ ೨೫

---

1 ರಾರುಂಟು (ಖ), ವೇ ನಾವು (ಟ.ದ). 2 ಹ (ಫ.ತ). 3 ಪ (ಕ.ಫ).
4 ನೃಪರ (ಫ.ತ). 5 ರಾರು (ಖ.ಫ.ತ). 6 ಳ (ಸ).

ಭೀಮನೆನೆ ಭುಗಿಲೆಂಬ ರೋಷದ
ತಾಮಸವ ಬೀಳ್ಕೊಟ್ಟೆಲಾ ನಿ
ರ್ನಾಮವಾದುವೆ ಬಿರುದು ಪಾಂಡವತಿಮಿರರವಿಯೆಂಬ।
ಭೀಮವನದಾವಾಗ್ನಿ ಹೊಱವಡು
ಭೀಮಭಾಸ್ಕರರಾಹು ಕೊಱವಡು
ಭೀಮಗರ್ಜನೆ ಮಧುರಗೀತವೆ ನೃಪತಿಯಾಳೆಂದ॥ ೨೬

ಕೆಡಹಿ ದುಶ್ಶಾಸನನ ರಕುತವ
ಕುಡಿದವನು ತಾನಲ್ಲಲೇ ನಿ
ನ್ನೊಡನೆ ಹುಟ್ಟಿದ ನೂಱ ನುಂಗಿದ ಕಾಲಯಮನಲ್ಲಾ।
ಅಡಗಿದಡೆ ಬಿಡುವೆನೆ ಭಯ ಜ್ವರ
ಹಿಡಿದ ನಿನ್ನನು ಸೆಳೆದು ರಣದಲಿ
ತೊಡೆಯ ಕಳಚುವ ಮೃತ್ಯು ಭೀಮನ ಕಯ್ಯ ನೋಡೆಂದ॥ ೨೭

ಜಲವ ಹೊಕ್ಕನ ಹುಲ್ಲ ಕಚ್ಚಿದ
ಖಳನ ತರುಗಿರಿಶಿಖರದಲಿ ಕಾ
ಲ್ದೊಳಸಿದನ ವಲ್ಮೀಕಸಂಗತನನು ನಿರಾಯುಧನ।
ಕೊಲುವುದನುಚಿತವೆಂಬ ಶಾಸ್ತ್ರವ
ತಿಳಿದು ನಂಬಿ[1]ದೆ[1] ನಿನ್ನನೊಬ್ಬನ
ಕೊಲುವುದಕೆ ಶ್ರುತಶಾಸ್ತ್ರ [2]ರಾವಲ್ಲೆಂದನಾ[2] ಭೀಮ॥ ೨೮

ಅರಸನಲಿ ಹಗೆಯಿಲ್ಲ ಯಮಳರು
ತರಳರಲಿ ಮುನಿಸಿಲ್ಲ ಫಲುಗುಣ
ನರೆವಿರೋಧಿ ಸಗರ್ವಿ ಭೀಮನ ಬಾಡ ಕೊಯ್ಕೊಯ್ದು।
ಮರುಳ ಬಳಗವ ತಣಿಸಿದಡೆ
ಹಿರಿಯರಸರಲಿ ಸಂಧಾನವೆಂಬೈ
ಕುರುಪತಿಯೆ [3]ನೆಱೆ ವೈರಿ ಭೀಮನ[3] ಸೀಳಲೇಳೆಂದ॥ ೨೯

ತನತನಗೆ ಸಾತ್ಯಕಿ ಯಮಳ ಫಲು
ಗುಣರು ಪಂಚದ್ರೌಪದೀನಂ
ದನರು ಧೃಷ್ಟದ್ಯುಮ್ನ ಸೃಂಜಯ ಸೋಮಕಾದಿಗಳು।

---

[1] ಹೆ (ಟ.ದ). [2] ರಾವಿಲ್ಲೆಂದನಾ (ಫ), ವೆನಗಿಲ್ಲೆಂದನಾ (ಗ.ಪ), ತನಗಿಲ್ಲೆಂದನಾ (ತ). [3] ನೆರೆವೀರ ಭೀಮನ (ಫ), ಕಲಭೀಮಸೇನನ (ಟ.ದ), ನೆರೆಧೀರ ಭೀಮನ (ತ).

ಅನುಚಿತವು ಸಲಿಲಪ್ರವೇಶವು
ಜನಪತಿಗೆ ಕರ್ತವ್ಯ[1]ವೆಂಬುದು[1]
ಜನಜನಿತವೆಂದುಲಿದುದ್ಭೈವೆ ಸಮುದ್ರಘೋಷದಲಿ ॥ ೩೦

ಅರಸ ಕೇಳೈ ನಿನ್ನ ಮಗನು
ಬ್ಬರಿಸಿದನು ರೋಮಾಂಚದಲಿ ಗ
ಬ್ಬರಿಸುತಧಿಕಕ್ರೋಧಶಿಖಿ ಕರಣೇಂದ್ರಿಯಾದಿಗಳ ।
ತುಱುಗಿದಂತಃಖೇದ ಮಂತ್ರಾ
ಕ್ಷರಕೆ ಜವನಿಕೆಯಾದುದೈ ನಿ
ರ್ಭರದ ವೀರಾವೇಶದಲಿ ಪಲ್ಲಟಿಸಿದನು ಭೂಪ ॥ ೩೧

ಮುಱಿದುದುದಕಸ್ತಂಭ ಸಲಿಲದ
ಹೊಱಗೆ ಬೊಬ್ಬುಳಿಕೆಗಳ ತೆರೆ ನೊರೆ
ದುಱು[2]ಗಿದವು[2] ಘುಳುಘುಳಿಸಿ ಜಲಬುದ್ಬುದದ ಚೂಣಿಯಲಿ।
ದುಱುದುಱಿಪ ಬಿಸುಸುಯ್ಲ ಸೆಕೆಯಲಿ
ಮುಱುಗಿ ಕುದಿದುದು ನೀರು ಭೀಮನ
ಬಿಱುನುಡಿಯ ಬೇಳಂಬದಲಿ ಬೆಂಡಾದನಾ ಭೂಪ ॥ ೩೨

[3]ಜ್ಞಾ[3]ನವಳಿದುದು ವೀರಪಣದಭಿ
ಮಾನ ಮಸೆದುದು ಮಂತ್ರನಿಷ್ಠೆಯ
[4]ಮೌ[4]ನ ಹಿಂಬೆಳೆಯಾಯ್ತು ಮೋಹಿದುದಾಹವವ್ಯಸನ।
[5]ದೀನಮನ ಹೊರೆಗಳೆದುದುದಕ
ಸ್ಥಾನಭಾವಕೆ[5] ನಾಚಿದನು ತವ
ಸೂನು ತಳವೆಳಗಾದನಹಿತವಚೋವಿಘಾತದಲಿ ॥ ೩೩

ಜಲಧಿ ಮಧ್ಯದೊಳೇಳ್ವ ವಡಬಾ
ನಲನವೊಲು ತವಕದಲಿ ತಡಿಗ
ವ್ವಳಿಸಿದನು ತತ್ಕ್ರೋಧಶಿಖಿ ಕಿಡಿಮಸಗೆ ಕಂಗಳಲಿ।
ಹೊಳೆವ ಭಾರಿಯ ಹೆಗಲ ಗದೆ ಕರ
ತಳದ ವಿಪುಳ ಸಘಾಡಗರ್ವದ
ಚಳನಯನದ ಭಡಾಳಭಲದ ನೃಪಾಲ ಹೊಱವಂಟ ॥ ೩೪

---

[1] ವೇಯಿದು (ಕ). [2] ಗಲಲಿ (ಕ). [3] ಮಾ (ತ). [4] ಧ್ಯಾ (ತ). [5] ದೀನಮನವನು ಹರೆಗಳೆದು ತಧ್ಯಾನಭಾವಕೆ (ಖ), ದೀನಮನ ಹರೆಗಳೆದು ರಣದ ಸ್ನೇಹ ಧಾರಕೆ (ಘ.ತ), ಹೀನಮನ ಹರೆಗಳೆದುದುಕಸ್ಥಾನಭಾಜನೆ (ಟ.ದ).

ಅರಳಿತರಸನ ವದನ, ಭೀಮನ
ಹರುಷವುಕ್ಕಿತು ಪಾರ್ಥನುಬ್ಬಿದ
ನುರುಮುದದಿನುಱೆ ನಕುಲನುಬ್ಬರಿಸಿದನು ಸಹದೇವ।
ಹರಕೆಯಲಿ ದೈವಂಗಳಿತ್ತವು
ವರವನೆಂದರು ದ್ರೌಪದೀಸುತ
ರುರು ಶಿಖಂಡಿ ದ್ರುಪದಸುತ ಸಾತ್ಯಕಿಗಳೊಲವಿನಲಿ ॥ ೩೫

ನಗೆ ಮಸಗಿ ಕರತಳವ ಹೊಯ್ಹೊ
ಯ್ದೊಗುಮಿಗೆಯ ಹರುಷವಲಿ ನಕುಲಾ
ದಿಗಳು ಬೊಬ್ಬಿಱಿದಾರಿದರು ಬಹುವಾದ್ಯರವದೊಡನೆ।
ಅಗಿದು ಗುಡಿಗಟ್ಟಿದವು ಮುಂಗಾ
ಲುಗಳ ಹೊಯ್ಲಲಿ ತೇಜಿಗಳು ಕೈ
ನೆಗಹಿ ಜಯಸೂಚನೆ[1]ಯುಲಿದೊಲೆದವು[1] ಪಟ್ಟದಾನೆಗಳು ॥ ೩೬

ಧರಣಿಪತಿ ಕೇಳ್ ಕೊಳನ ತಡಿಯಲಿ
ಕುರುಕುಲಾಗ್ರಣಿ ನಿಂದು ನೋಡಿದ
ನರಿಭಟರ ಸುಮ್ಮಾನವನು ಸಂಭ್ರಾಂತಚೇತನವ।
ಉರಿದುದಾ ಮಸ್ತಕದ ರೋಷೋ
ತ್ಕರದ ಝಳಝಾಡಿಸಿತು [2]ಶುಭ್ರ[2]
ಸ್ಫುರಣದಂತನಿಪೀಡಿತಾಧರನಾದನಾ ಭೂಪ ॥ ೩೭

ಪೂತು ಮಝು ಕುರುಪತಿಯು ಘನಸ
ತ್ವಾತಿಶಯವೈ ಕೌರವಾನ್ವಯ
ಜಾತನಲ್ಲಾ ಬುಧ ಪುರೂರವ[3]ಶಕ್ರಮಾಗತರ[3]।
ಖ್ಯಾತನಲ್ಲಾ ಬಂದುದೊಂದ
ಖ್ಯಾತಿ ಸಲಿಲ[4]ದ ಗಾ[4]ಹವುಳಿದಂ
ತೀತನೊಳು ದೊರೆಯಾರು ಸರಿಯೆಂದನು ಮಹೀಪಾಲ ॥ ೩೮

ಅರಸ ತೊಡು ಕವಚವನು ಚಾಮೀ
ಕರ ಪರಿಷ್ಕೃತ ವಜ್ರಮಯ ಬಂ
ಧುರದ ಸೀಸಕವಿದೆ ದುಕೂಲವರಾನುಲೇಪನವ।

---

[1] ಯೊಳಿರ್ದವು (ಕ). [2] ಸಧೃತ (ತ), ಶಬ್ದ (ಪ). [3] ವಿಕ್ರಮಾಗತದ (ಖ), ಸತ್ಯಮಾಗತರ (ಘ), ನಹುಷನಾಯಕನ (ಟ), ಸತ್ವಮಾಗತದ (ತ). [4] ವಿಗಾ (ತ).

ಪರಿಹರಿಸಬೇಡೊಲವಿನಲಿ ಪತಿ
ಕರಿಸೆನುತ ಪೆಟ್ಟಿಗೆಯ ಮುಚ್ಚಳ
ತೆಱೆದು ಮುಂದಿರಿಸಿದನು [1]ಸೌಹಾರ್ದ[1]ದಲಿ ಯಮಸೂನು॥ ೩೯

ಪೂರವಿಸಿದನು ಗಂಧವನು ಸರ
ಳೋರೆಪೋರೆಯ ಮೈಯ ಘಾಯದ
ಹೇರುಗಳ [2]ಹೂಳಿದನು ವರಕಸ್ತುರಿಯ ಸಾರದಲಿ[2]।
ಸಾರತರ ಸಾದಿನ ಜವಾಜಿಯ
ಭೂರಿ ಪರಿಮಳದಿಂದ ನವಕ
ಸ್ತೂರಿ ತಿಲಕವ ರಚಿಸಿ ಗೆಲಿದನು ತಿಗುರ ತವಕದಲಿ॥* ೪೦

ತೆಗೆದು ವಜ್ರಾಂಗಿಯನು ಮೈಯಲಿ
ಬಿಗಿದು ಹೊಂಬರಹದ ಸುರತ್ನಾ
ಳಿಗಳ ಬಲುಸೀಸಕವನಳವಡಿಸಿದನು ಸಿರಿಮುಡಿಗೆ।
ಝುಗಝುಗಿಪ ಬೆಳುದಿಂಗಳಿನ ತೆಳು
ವಗಡೆನಲು ತೊಳಗುವ ದುಕೂಲವ
ಬಿಗಿದು ಮೊನೆಮುಂಜೆಱಗನಳವಡಿಸಿದನು ದೇಸಿಯಲಿ॥ ೪೧

ಘೋಳಿಸಿದ ಕರ್ಪೂರ ಕಸ್ತುರಿ
ವೀಳೆಯವ ಕೊಂಡೆದ್ದು ಸಮರಾ
ಭೀಳಗದೆಯನು ತಿರುಹಿದನು ಪಯಪಾಡನಾರೈದು।
ಆಳು ಕವಿಯಲಿ ರಾವುತರ ಸಮ
ಪಾಳಿಯಲಿ ಬಿಡಿ ಜೋದರಾನೆಯ
ತೂಳಿಸಲಿ ಸಮರಥರು ಸರಳಿಸಿಯೆಂದನಾ ಭೂಪ॥ ೪೨

ಹಿಡಿ ಧನುವನೆಲೆ ಭೂಪ ಪವನಜ
ತುಡುಕು ಗದೆಯನು ಪಾರ್ಥ ಸಮರಕೆ
ತಡೆಯದಿರು ಮಾದ್ರೀಕುಮಾರಕರೇಳಿ ಕಾಳೆಗಕೆ।
ಮಿಡುಕು ಧೃಷ್ಟದ್ಯುಮ್ನ ಸಾತ್ಯಕಿ
ಹೊಡಕರಿಸು ಪಾಂಚಾಲ ನೀ ವಂ
ಗಡದೊಳೆಮ್ಮೊಡನೇಳ್ವುದೊಬ್ಬನೆ ನಿಲುವೆ ತಾನೆಂದ॥ ೪೩

---

[1] ಸೌಭರಿಯ (ಕ), ಸೌಹೃದ್ಯ (ಘ), ಸಹೃದಯ (ತ). [2] ಮೆತ್ತಿದನು ಘಟ್ಟಿಯ ಗಂಧಸಾರದಲಿ (ಟ). * ಈ ಪದ್ಯವು (ಘ) ಪ್ರತಿಯಲ್ಲಿಲ್ಲ; (ತ) ಪ್ರತಿಯಲ್ಲಿ ಪೂರ್ವೋತ್ತರಾರ್ಧಗಳು ಹಿಂದುಮುಂದಾಗಿವೆ.

ದಿಟ್ಟನೈ ನೃಪರಾವು ಮೆಝು ಜಗ
ಜಟ್ಟಿಯಲ್ಲಾ ದೊರೆಗಳೊಡನೀ
ಥಟ್ಟಿಗೊಬ್ಬನೆ ನಿಲುವೆನೆಂ[1]ದನದಾವ ಸತ್ವನಿಧಿ[1] ।
ಹುಟ್ಟಿದವರಿಗೆ ಸಾವು ಹಣೆಯಲಿ
ಕಟ್ಟಿಹುದು ವಿಧಿಯೆಂದಡೀ ಪರಿ
[2]ಮುಟ್ಟಿ ದೀವಸಿ[2]ಯಾವನೆಂದುದು ನಿಖಿಳ ಪರಿವಾರ ॥ ೪೪

ಮೆಚ್ಚಿದನು ಯಮಸೂನು ಭಲ ನಿನ
ಗೊಚ್ಚತವಲ್ಕೆ ವೈರಿಭಟರಲಿ
ಬೆಚ್ಚಿದಾಡಿದೆಯಾದಡೇನದು ನಮ್ಮೊಳೈವರಲಿ ।
ಮೆಚ್ಚಿದರ ನೀ ವರಿಸಿ ಕಾದುವು
ದಚ್ಚರಿಯ ಮಾತೇನು ಗೆಲವಿನ
ನಿಚ್ಚಟನೆ ನೆಲಕೊಪೆಯನಹುದಿದು ಸಮಯುಕ್ತವೆಂದ ॥ ೪೫

ನಿನಗೆ ಸೋ[3]ಲವೆ[3] ನಾವು ಭೂಕಾ
ಮಿನಿಯನಾಳ್ವೆವು ನಮ್ಮೊಳೊಬ್ಬರು
ನಿನಗೆ ಸೋತಡೆ ಮಿಕ್ಕ ನಾಲ್ವರು ನಿನಗೆ ಕಿಂಕರರು ।
ನಿನಗೆ ಹಸ್ತಿನಪುರದ ಸಿರಿ ಸಂ
ಜನಿತವೀ ಸಂಕೇತವೇ ಸಾ
ಧನ ನಿನಗೆ ನಮಗೆಂದು ನುಡಿದನು ಧರ್ಮಸುತ ನಗುತ ॥ ೪೬

ಹಾ ಯುಧಿಷ್ಠಿರ ನಿಮ್ಮ ಕೂಡೆಮ
ಗಾ[4][ಯ][4]ಬಲವಿಲ್ಲರ್ಜುನನು ಮಗು
ವೀ ಯಮಳರಿಗೆ ಕೈದುಗೊಳ್ಳೆನು ಹೊಯ್ದು ಕೆಣಕಿದಡೆ ।
ಬಾಯಿಬಡಿಕನು ಸತ್ವದಲ ನಾ
ಗಾಯುತದ ಬಲವೆಂಬ ಡೊಂಬಿನ
ವಾಯುವಿನ ಮಗನೆನ್ನೊಡನೆ ಮಾಱಾಂತಡಹುದೆಂದ ॥ ೪೭

ವರಿಸಿದೆನು ಭೀಮನನು ನೀವಾ
ದರಿಸುವಡೆ ಧರ್ಮವನು ದುರ್ಜನ
ಸರಣಿಯಲಿ ನೀವ್ ಒಹಡೆ ದಳನಹಿ[5]ತ್ತೈವರಿದಿರಹುದು[5] ।

---

[1] ದೆಯಿದಾವಸತ್ವದಲ (ಖ.ಘ.ತ), ದನದಾವಸಾಹಸವೊ (ಗ.ಟ.ದ),
[2] ಮುಟ್ಟಿದವನೀ (ಕ). [3] ಲವು (ಕ). [4] ವ (ಸ). [5] ತೇಳಿ ಕಾಳೆಗಕೆ (ಕ).

ತೆರಳುವವರಾವಲ್ಲ ನೀವ್ ಪತಿ
ಕರಿಸಿದುದೆ ನಮ್ಮಿಷ್ಟವೆನೆ ಮುರ
ಹರ ಯುಧಿಷ್ಠಿರನೃಪನನೆಕ್ಕಟಿಗರೆದ. ಗರ್ಜಿಸಿದ॥ ೪೮

ಮರುಳೆ ನೀ ಹೆಚ್ಚಾಳುತನವನು
ಬ್ಬರಿಸಿ ನುಡಿದೆ ಸುಯೋಧನನ ನೀ
ನಱಿಯಲಾಗದೆ ಕೈಗೆ ಬಂದರೆ ಕದನಭೂಮಿಯಲಿ।
ಸರಿಸದಲಿ ಮಲೆತವನು ಜೀವಿಸಿ
ಮರಳಲಱಿವನೆ ನಮ್ಮೊಳೊಬ್ಬನ
ವರಿಸು ವಿಗ್ರಹಕೆಂದು ನಮ್ಮನು ಕೊಂದೆ ನೀನೆಂದ॥ ೪೯

ಗೆಲಿದಡೈವರೊಳೊಬ್ಬನನು ಮಿ
ಕ್ಕುಳಿದವರು ಕಿಂಕರರು ಗಡ ನೀ
ತಿಳಿದು ನುಡಿದಾ ನಿನ್ನನಾಹವಮುಖಕೆ ವರಿಸಿದಡೆ।
ಗೆಲಲು ಬಲ್ಲಾ ನೀನು ಫಲುಗುಣ
ಗೆಲುವನೇ ನಿನ್ನುಳಿದರಿಬ್ಬರು
ನಿಲುವರೇ ಕುರುಪತಿಯಘಾಟದ ಗದೆಯ ಘಾಯದಲಿ॥ ೫೦

ಇಂದು ನಮ್ಮಯ ಭಾಗ್ಯಲಕ್ಷ್ಮಿಯ
ಕಂದೆಱವೆಯಲಿ ಭೀಮ ಕಾದುವ
ದೆಂದು ಜಾಱಿಸಿ ನಿಮ್ಮ ಬಿಟ್ಟನು ನಮ್ಮ ಪುಣ್ಯದಲಿ।
ಇಂದಿನೀ ಸಮರದಲಿ ಪವನಜ
ನಿಂದಡೇನಹುದೆಂಬ [1]ಚಿತ್ತದ[1]
ಸಂದೆಯವು ನಮಗುಂಟು ಕೌರವನೈಸು ಬಲುಹೆಂದ॥ ೫೧

ಎಲೆ ಮುರಾಂತಕ ನಿಮ್ಮ ಮುಂದ
ಗ್ಗಳೆಯತನವೆಮಗಿಲ್ಲ ನಿಮ್ಮಡಿ
[2]ಗಳ ಸುಧಾ[2]ಕರುಣಾವ[3]ಧಾನವೆ[3] ವಜ್ರಕವಚವಲಾ।
ಮಲೆತ ಹಗೆವನ ಪಡಿಮುಖದ ಬಲು
ವಲಗೆಯಲಿ ಗದೆಯಿಂದ ರಾಯನ
ಬಲುಹ ಬಿರುದಾವಳಿಯ ಬರೆವೆನು ಕೃಷ್ಣ ಕೇಳೆಂದ॥ ೫೨

[1] ಗೆಲವಿನ (ಫ). [2] ಗಳೆಸಿದಾ (ತ). [3] ರೋಕನ (ಗ.ಟ.ಪ).

ಪೂತು ಮಝು ಭಟ ಎನುತ ಕಂಸಾ
ರಾತಿ ಕೊಂಡಾಡಿದನು ಸಾತ್ಯಕಿ
ಭೂತಳಾಧಿಪ ಪಾರ್ಥ ಯಮಳಾದಿಗಳು ನಲವಿನಲ।
ವಾತಜನ ಹೊಗಳಿದರು ಸುಭಟ
ವ್ರಾತ[1]ಸೌಹಾರ್ದ[1]ದಲಿ ಶೌರ್ಯ
ಖ್ಯಾತಿಯನು ಬಣ್ಣಿಸಿದುದವನೀಪಾಲ ಕೇಳೆಂದ॥ ೫೩

ಗದೆಯ ಕೊಂಡನು ಕೌರವೇಂದ್ರನ
ನಿದಿರುಗೊಂಡನು ಭೀಮ ಬಲವಂ
ಕದಲಿ ವಾಮಾಂಗದಲಿ ಬಳಸಿದರಗ್ರಜಾನುಜರು।
ಕದನಭೂಮಿಯ [2]ಬಿಡವ[2]ಬಿದು ನಿಂ
ದುದು ಚತುರ್ಬಲ ಸುತ್ತಿ ಗಗನದೊ
ಳೊದಗಿದುದು ಸುರನಿಕರ [3]ತೀವಿ[3] ವಿಮಾನವೀಥಿಯಲಿ॥ ೫೪

ಚಟುಳತರ ಧಾರಂಕದಂಕದ
ಭಟರು ತಱುಬಿದರುಬ್ಬೆಯಲಿ ಲಟ
ಕಟಿಸಿದವು ಕಣ್ಣಾಲಿ ಬದ್ಧ ಭ್ರುಕುಟಿಭಂಗದಲಿ।
ಕಟುವಚನ ವಿಕ್ಷೇಪರೋಷ
ಸ್ಫುಟನವೇಲ್ಲಿತವಾಕ್ಯಭಂಗೀ
ಘಟನವಿಘಟನದಿಂದ ಮೂದಲಿಸಿದರು ಮುಳಿಸಿನಲಿ॥* ೫೫

ಅರಸ ಕೇಳಿವರಿಬ್ಬರುಬ್ಬಿನ
ಧುರದ ಘಟ್ಟಣೆ[4]ಪಸರಿಸಿತು[4] ಸುರ
ನರರನಾ ಸಮಯದಲಿ ಪೂರ್ವೋತ್ತರದ ದೆಸೆಯಿಂದ।
ವರ ಮುನಿಸ್ತೋಮದ ನಡುವೆ ಕಂ
ಧರದ ಮುಸಲದ ವಿಮಳ ನೀಲಾಂ
ಬರದ ರಾಮನ ಸುಳಿವ ಕಂಡರು ಕೃಷ್ಣ ಪಾಂಡವರು॥ ೫೬

ಆ ನಿಖಿಳ ಪರಿವಾರದನುಸಂ
ಧಾನ ದೃಷ್ಟಿಗಳತ್ತ ತಿರುಗಿದ
ವೇನನೆಂಬೆನು ಮುಸಲಧರನಾಗಮನ ಸಂಗತಿಯ।

---

[1] ಸಂಹಾರ್ಥ (ಕ), ಸೌಹೃದ್ಯ (ಘ,ತ). [2] ಬಿಡೆಯ (ಖ,ಟ). [3] ವಿವಿಧ (ಕ). * ಈ ಪದ್ಯ (ಘ) ಪ್ರತಿಯಲ್ಲಿಲ್ಲ. [4] ಮುಸುಕಿತ್ತೈ (ಘ), ಮುಸುಕಿಸಿತು (ತ).

[1]ಈ[1] ನರೇಂದ್ರನ ಸುಮುಖತೆಯ ಸು
ವ್ಯಾಮನ ಹೊಳೆದುದು [2]ಭಯದಿ[2] ಕುಂತೀ
ಸೂನುಗಳು ಮಱೆಗೊಳುತಲಿ[3]ರ್ದುದು[3] ವೀರನರಯಣನ ‖ ೫೭

ಐದನೆಯ ಸಂಧಿ ಮುಗಿದುದು.

---

[1] ಆ (ಕ.ತ). [2] ಜೀಯ (ಘ.ತ). [3] ರ್ದರು (ಕ).

# ಆರನೆಯ ಸಂಧಿ

---

ಸೂಚನೆ॥ ರಂಜಿಸಿತು [1]ತ್ರೈಭುವನವನು ರಿಪು[1]
ಧಂಜನದ ಧಾರವಣಿ ಸುಭಟರ
ನಂಜಿಸಿತು ಕಲಿಭೀಮದುರಿಯೋಧನರ ಸಂಗ್ರಾಮ॥

ಕೇಳು [2]ಧೃತರಾಷ್ಟ್ರಾವನಿಪ[2] ಸಿರಿ
ಲೋಲ ಸಹಿತ ಯುಧಿಷ್ಠಿರಾದಿ ನೃ
ಪಾಲಕರು ಕಾಣಿಕೆಯನಿತ್ತರು ನಮಿಸಿ ಹಲಧರ[3]ಗೆ[3]।
ಮೇಲುದುಗುಡದ ಮುಖದ ನೀರೊಱೆ
ವಾಲಿಗಳ ಕಕ್ಷದ ಗದೆಯ ಭೂ
ಪಾಲ ಬಂದನು ನೊಸಲ ಚಾಚಿದನವರ ಚರಣದಲಿ॥ ೧

ಇಳಿದು ಗಜಹಯರಥವ ಸುಭಟಾ
ವಳಿ ಕೃತಾಂಜಲಿ ನೊಸಲೊಳಿರೆ ಕೆಲ
ಬಲಕೆ ಸಾರ್ದರು ನೋಡಿದನು ಪಾಂಡವ ಪತಾಕಿನಿಯ।
ಉಳಿದುದೀಚೆಯಲೀಸು [4]ಬಲವಿವ[4]
ನುಳಿದನೊಬ್ಬನೆ ದೈವಗತಿಗಾ
ರಳಲಿ ಮಾಡುವುದೇನೆನುತ ನುಡಿಸಿದನು ಕುರುಪತಿಯ॥ ೨

ಗುರುವೊ ಗಂಗಾಸುತನೊ ಮಾದ್ರೇ
ಶ್ವರನೊ ಕರ್ಣನೊ ಸೈಂಧವನೊ ಸೋ
ದರರ ಶತಕವೊ ಪುತ್ರ ಮಿತ್ರ ಜ್ಞಾತಿ ಬಾಂಧವರೊ।
ಹರಿಸಿ ಕುಱಿಗಳನಿಕ್ಕಿದಡೆ ಗೋ
ಚರಿಸದೇ ರಣವಿಜಯ[5]ನಿಧಿ[5] ಹರ
ಹರ ಎನುತ ಕರಗಿದನು ಕಡು ಕರುಣದಲಿ ಬಲರಾಮ॥ ೩

ಆಹವ[6]ದಿ[6] ಪಾಂಡವ ಮಮ ಪ್ರಾ
ಣಾ ಹಿ ಎಂಬೀ ನುಡಿಯ ಸಲಿಸಿದೆ
ಬೇಹವರನುಳುಹಿದೆ ಕುಮಾರರ ನಿನ್ನ ಮೈದುನರ।

---

[1] ತ್ರಿಭುವನವ ರಿಪುಭಟ (ಟ.ತ.ದ) [2] ಜನಮೇಜಯಧರಿತ್ರೀಪಾಲ (ಫ.ತ). [3] ನಾ (ಕ). [4] ವರಬಲ (ಕ). [5] ಸಿರಿ (ಖ.ಫ.ತ), ವಿಧಿ (ಟ.ದ). [6] ಕೆ (ಕ.ಖ.ತ).

ಗಾಹುಗತಕದಲೆಮ್ಮ ಶಿಷ್ಯಂ
ಗೀ ಹದನ ವಿರಚಿಸಿದೆ ನಿನ್ನಯ
ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮ ॥ ೪

ತಿಳಿದು ನೋಡಿರೆ ರಾಮ ಧರ್ಮ
ಸ್ಥಳಕೆ ನೀವು ಸಹಾಯ[1]ವಿ[1]ನಿಬರ
ಗೆಲವು ನಿರ್ಮಳ ಧರ್ಮಮೂಲವೊ ಧರ್ಮವಿರಹಿತವೊ।
ಛಲವ ಬಿಡಿರೇ ನಿಮ್ಮ ಶಿಷ್ಯನು
ಕಲಿವೃಕೋದರನಲ್ಲ[2]ವೇ ತವೆ[2]
ಬಳಸಬಹುದೇ ಪಕ್ಷಪಾತದೊಳೆಂದನಸುರಾರಿ ॥ ೫

ನಿವಗೆ ಪಾಂಡವ ಪಕ್ಷಪಾತ
ವ್ಯವಹರಣೆ ಹುಸಿ ನಾವಲೇ ಕೌ
ರವನ ಪಕ್ಷಾವೇಶಿಗಳು ಸಾಕಿನ್ನದಂತಿರಲಿ।
ಎವಗೆ ಸರಿಯಿಬ್ಬರು ಗದಾಭ್ಯಾ
ಸವನು ನಮ್ಮಲಿ [3]ಮಾಡಿದರು[3] ತಾ
ವಿವರು ಕಾದಲಿ ನಾವು ನೋಡುವೆವೆಂದನಾ ರಾಮ ॥ ೬

ಎಲೆ ಮುನೀಶ್ವರ ಪೂರ್ವದಲಿ ಯದು
ಬಲ ವಿಭಾಗದಲವರ ದೆಸೆಯಲಿ
ಹಲಧರನು ಕೃತವರ್ಮನಾ ಪಾಂಡವರಿಗಸುರಾರಿ।
ಬಳಿಕ ಸಾತ್ಯಕಿಯೀ ಹಸುಗೆಯ
ಸ್ಖಲಿತವಿದಱಲಿ ರಾಮನೀ ಕುರು
ಬಲವ ಬಿಟ್ಟನದೇಕೆನುತ ಜನಮೇಜಯನು ನುಡಿದ ॥ ೭

ಕೇಳು ಜನಮೇಜಯ ಧರಿತ್ರೀ
ಪಾಲ ಸಂಧಿಯ ಮುಱಿದು ಲಕ್ಷ್ಮೀ
ಲೋಲ ಬಿಜಯಂಗೈ[4]ಯನೇ[4] ಕುರುಪತಿಯನವಗಡಿಸಿ।
ತಾಳಹಳವಿಗೆಯವನು ಯಾದವ
ಜಾಲಸಹಿತೈತಂದು ಕಾರ್ಯದ
ಮೇಲುವಾಗಿನ ಹದನನ[5]ಱಿದನು ಕೃಷ್ಣನಭಿಮತವ[5] ॥ ೮

[1] ರ (ಫ.ತ). [2] ದುಳಿದರು (ಕ), ವೈರವ (ಫ.ತ). [3] ಕಲಿತವರು (ಫ.ತ.ಪ). [4] ದನ್ಯೆ (ಕ). [5] ನೆಚ್ಚಱಿಸಿರ್ದರಭಿಮತವ (ಫ.ತ).

ಎವಗೆ ಸರಿಯಿತ್ತಂಡ [1]ನೀ[1] ಕೌ
ರವನ ಮುಱಿವೆ ಯುಧಿಷ್ಠಿರನನಾ
ಹವ[2]ವ[2] ಗೆಲಸುವೆ ಸಾಕು [3]ನೃಪರ[3]ಬ್ಬರಲಿ [4]ಸಂವಾದ[4]।
ಎವಗೆ ತೀರ್ಥಕ್ಷೇತ್ರಯಾತ್ರಾ
ವ್ಯವಸಿತಕೆ ಮನವಾದುದೆಂದು
ತ್ಸವದಿನಸುರಾರಿಯನು[5]ಪಪ್ಲವ್ಯದಲಿ ಬೀಳ್ಕೊಂಡ[5]॥* ೯

ರಾಮ ಕಳುಹಿಸಿಕೊಂಡು ವಿಪ್ರ
ಸ್ತೋಮಸಹಿತ ಸಮಸ್ತ ಋಷಿಗಳು
ರಾಮಣೀಯಕವೆಸ್ತ ದಾನವ್ಯಯದ ವೈಭವಕೆ।
[6]ಸೌಮನಸ್ಯನು ರಾಗಹರದ ಮ
ಹಾಮಹಿಮ ತೀರ್ಥಾಭಿರತಿಯಲಿ
ಗೋ ಮಹಿಷ ಧನ ವಸ್ತ್ರದಿಂ ದ್ವಿಜವರರನರ್ಚಿಸಿದ[6]॥ ೧೦

ಗಂಗೆ ಮೊದಲಾದ[7]ಮಳತರ[7] ತೀ
ರ್ಥಂಗಳಲಿ ತ[8]ದ್ವಾ[8]ರಣಾಖ್ಯಾ
ನಂಗಳಲಿ ತತ್ತದ್ವಿಶೇಷವಿಧಾನ ದಾನದಲಿ।
ತುಂಗವಿಕ್ರಮನೀ ಸಮಸ್ತ ಜ
ನಂಗಳೊಡನೆ ಸುತೀರ್ಥಯಾತ್ರಾ
ಸಂಗತಿಯಲೇ ಬಳಸಿದನು ಭೂಮಿಪ್ರದಕ್ಷಿಣವ॥ ೧೧

ಅವನಿಪತಿ ಕೇಳ್ ಪುಷ್ಯದಲಿ ಸಂ
ಭವಿಸಿದುದು ನಿರ್ಗಮನ ಬಳಿಕಾ
ಶ್ರವಣನಕ್ಷತ್ರದಲಿ ಕಂಡನು ಕೃಷ್ಣಪಾಂಡವರ।

---

[1] ವೀ (ಕ). [2] ಕೆ (ಕ) [3] ನಮಗಿ (ಖ). [4] ಸೌಹಾರ್ದ (ಟ.ದ). [5] ಬಲನುಚಿತದಲಿ ಬೀಳ್ಕೊಂಡ(ಫ.ತ), ಬೀಳ್ಕೊಂಡ ನಾರಾಮ (ಪ). * ಈ ಪದ್ಯಕ್ಕೆ ಮೊದಲು (ಗ) ಪ್ರತಿಯಲ್ಲಿ ಕೆಳಗಿನ ಪದ್ಯ ಹೆಚ್ಚಾಗಿದೆ :—

ಮನದೊಳರಿದನು ರಾಮ ತಾ ಹರಿ। ಘನತರವಲಾ ಪಾಂಡುಸುತರನು
ಅನುಕರಿಸಿ ಸೋಲಿಸುವ ಕೌರವಬಲವನೆಲ್ಲವನು।
ಮುನಿಯಲೇಯನು ಇಲ್ಲಿ ನಾವಿಹು। ದನುಚಿತವಲೇಯೆನುತಮೆಲ್ಲನೆ
ಮನುಮಥನ ಪಿತನಲ್ಲಿಗೊಡನೈತಂದನಾ ರಾಮ॥

[6] ಸೌಮನಚ್ಯುತರಾಗಹರುಷಮಹಾಮಹಿಮತೀರ್ಥಾಭಿರತಿಯಲಿ ಗೋಮಹಿಷ ಧನ ವಸ್ತ್ರದಿಂದೀ ದ್ವಿಜವರರ ನರ್ಚಿಸಿದ (ಕ), ಸೌಮನಸ್ಸಿತನಾಗಿ ಹರದ ಮಹಾಮಹಿಮ ತೀರ್ಥಾದಿ ತಡಿಯಲಿ ಗೋಮಹಿಷಿ ಧನವಸ್ತ್ರದಿಂ ದ್ವಿಜಜನವನರ್ಚಿಸಿದ (ಖ), ಸೋಮನದ್ಭುತರೋಗಹರದ ಮಹಾಮಹಿಮ ತೀರ್ಥಾಭಿರತಿಯಲಿ ಗೋಮಹಿಷ್ಯ ಸುವರ್ಣದಾನದಿ ದ್ವಿಜರ ನರ್ಚಿಸಿದ (ಫ.ತ). [7] ಖಿಳವರ (ಕ). [8] ತ್ಯಾ (ಕ).

ಅವರು ನೋಟಕರಾದರೀ ಕೌ
ರವ ವೃಕೋದರರಠಂಕ ಮಸೆದು
ತ್ಸವದಿ ಕಳನೇಱಿದರು ಹೆಱುಕಿ ಹಿಡಿದು ನಿಜಗದೆಯ || ೧೨

ಧಾರುಣೀಪತಿ ಕುಳ್ಳಿರೈ ಪರಿ
ವಾರ ಕುಳ್ಳಿರಿ ಪಾರ್ಥ ಸಾತ್ಯಕಿ
ವೀರ ಧೃಷ್ಟದ್ಯುಮ್ನ ಯಮಳ ಶಿಖಂಡಿ ಸೃಂಜಯರು |
ವೀರ ಭಟರೆಮ್ಮಾಹವದ ವಿ
ಸ್ತಾರವನು ಸಮ ವಿಷಮ ಪಯಗತಿ
ಯೋರೆಪೋರೆಯನಱಿವುದೆಂದನು ನಗುತ ಕುರುರಾಯ || ೧೩

ಚಿತ್ತವಿಸು ಬಲರಾಮ ರಿಪುಗಳ
ತೆತ್ತಿಗನೆ ಲೇಸಾಗಿ ನೋಡು ನೃ
ಪೋತ್ತಮರು ಪಾಂಚಾಲ ಸೃಂಜಯ ಸೋಮಕಾದಿಗಳು |
ಇತ್ತಲಭಿಮುಖವಾಗಿ ರಥಿಕರು
ಮತ್ತಗಜದಾರೋಹಕರು ರಾ
ವುತ್ತರೀಕ್ಷಿಸಿ ನಮ್ಮ ಸಮರವನೆಂದನವನೀಶ || ೧೪

ಓಡಿ ಜಲದಲಿ ಮುಳುಗಿದವಱಗೆ
ಖೋಡಿಯುಂಟೇ ರಥವಿಳಿದ ರಣ
ಖೇಡ ಕಾಲಾಳಿಂಗೆ ಪಯಗತಿಯೋರೆಪೋರೆಗಳೆ |
ನೋಡುತಿದೆ ಪರಿವಾರ ನೀ ಕೈ
ಮಾಡಿ ತೋಱಾ ಬಱಿಯ ಕಂಠದ
ಮೂಡಿಗೆಯ ಡಾವರದ ಲೇಸಹುದೆಂದನಾ ಭೀಮ || ೧೫

ಆಟವಿಕ ಸಂಗದಲಿ [1]ಬಹುವಾ
ಚಾಟ[1] ನೀನಹೆ ನಿನ್ನ ಪುಣ್ಯದ
ತೋಟವನು ತಱಿದೊಟ್ಟಿ ನಿಮ್ಮೈವರನು ಯಮಪುರದ |
ಗೋಟಿನಲಿ ಗುಱಿಮಾಡುವೆನು ಜೂ
ಜಾಟದಲಿ [2]ನೀವಱಿಯಿರೇ[2] ಬೊ
ಬ್ಬಾಟವಂದೇನಾಯಿತೆಂದನು ಜಱೆದು ಕುರುರಾಯ || ೧೬

---

[1] ಬಱಿ ಬೊಬ್ಬಾಟ (ಘ. ತ). [2] ನೀನುಡಿದಬಱಿ (ಕ)

ಶಕುನಿ ಕಲಿಸಿದ ಕಪಟದಲಿ ಕೌ
ಳಿಕದಲುಬ್ಬಿದಿರಿದಟಿ ವಿಸ್ತಾ
ರಕ[1]ರ[1]ಲೇ ನಾವಿಂದಿನಲಿ ದುಶ್ಶಾಸನಾದಿಗಳ।
ರಕುತಪಾನ ಭವತ್ಸಹೋದರ
ನಿಕರನಾಶನವಟುಹದೇ ಸು
ಪ್ರಕಟವಿದು ಜಗಕೆಂದು ಗದೆಯನು ತೂಗಿದನು ಭೀಮ॥ ೧೭

ಸಾಯಲಾಗದೆ ಸುಭಟರಾಚಂ
ದ್ರಾಯತವೆ ತನು ವಿಧಿಯ ಟ[2]ಪ್ಪ[2]ಣ
ದಾಯುಷವು ತೀರಿದಡೆ ಸಾವರು [3]ನಿನ್ನಲೇನಹುದು[3] ।
ಕಾಯಲಳವೇ ನಿನಗೆ ಮುನಿದಡೆ
ನೋಯಿಸುವುಡಳವಲ್ಲ ಫಡ ದೈ
ವಾಯತಕೆ ನೀನೇಕೆ ಬೆರೆತಿಹೆಯೆಂದನಾ ಭೂಪ॥ ೧೮

ಎಲವೊ ದುರ್ಮತಿ ನಿನ್ನ ಕೌರವ
ಕುಲದ ಶಿಕ್ಷಾರಕ್ಷೆಗಿನ್ನಾ
ರೊಳರು ಹೊಟಬಿಗ ದೈವವುಂಟೇ ತಾನೆ ದೈವ ಕಣಾ।
ಕಳಚಿದೆನಲಾ ಕೊಂದು ನೂರ್ವರ
ತಲೆಯನಿನ್ನರೆಘಳಿಗೆಯಲಿ ಹೆಡ
ತಲೆಯನೊದೆವೆನು ಹೋಗೆನುತ ಹೊಯ್ದನು ಸುಯೋಧನನ॥ ೧೯

[4]ಬಿಡಸಿದಡೆ[4] ಗದೆಯಿಂದ ಹೊಯ್ಲುಗ ಳ
ತಡೆದು ತಿವಿದನು ನಿನ್ನ ಮಗನವ
ಗಡದ ಘಾಯಕೆ ಗದೆಯನೊಡ್ಡಿ [5]ಸ[5]ಗಾಢಕೋಪದಲಿ।
ತುಡುಕಿದನು ಕಲಿಭೀಮ ಹಜ್ಜೆಯೊ
ಳೆಡೆಮುರಿದು ನಿನ್ನಾತನೌಕಿದ
ರೊಡನೊಡನೆ ಗಾಹಿಸಿದರುಚಿತದ ಗತಿಯ ಗಮ[6]ಕ[6]ದಲಿ॥ ೨೦

ಹೊಯ್ದು ಬಿಡಿಸಿದಡನಿಲಜನ ಮೇ
ಲ್ವಾಯ್ದನವನಿಪನೊಡ್ಡಿ ಗದೆಯಲಿ
ಕಾಯ್ದು ತಿವಿದನು ಭೀಮಸೇನನ ನೃಪತಿ ವಂಚಿಸಿದ।

[1] ವ (ಕ.ಖ.ಟ.ದ). [2] ಬ್ಬ (ಕ). [3] ನೋವರದಕೇನು (ತ). [4] ಬಿಡಿಸಿಗದೆ (ಕ), ಬಿಡಿಸಿದನು (ಖ), ಹೊಡೆದಡಾ (ಘ). [5] ದ (ಕ). [6] ನ (ಕ.ಖ).

ಮೆಯ್ದುಗೆದಡಿಟ್ಟಣಿಸಿ ಪವನಜ
ಹೊಯ್ದುಡೊಲೆದನು ಭೂಪನಿಬ್ಬರ
ಕಯ್ದುಕಾಱತನಕ್ಕೆ ಬೆಱಗಾದುದು ಸುರಸ್ತೋಮ॥ ೨೧

ಸುಳಿದರೆಡಬಲ ಚಾರಿಯಲಿ ಚಾ
ಪಳದ ಪಯಪಾಡಿನಲಿ ಚಿತ್ರದ
ಚಳಗತಿಯ [1]ಚೇತನದ ಚಡ್ಡಣೆಗಳ ಚಡಾಳದಲಿ[1]।
ಹೊಳೆದೆರಾವರ್ತದಲಿ ಪರಿಮಂ
ಡಳಿಸಿದರು ಠಾಣದಲಿ ಜಂಘೆಯ
ಲುಳಿಯ [2]ಲವಠಾಣದಲಿ[2] ಮೆಱೆದರು ಭೀಮ ಕೌರವರು॥ ೨೨

ಒಳಹೊಗುವ ಹೆಱತೆಗೆವ ಘಾಯವ
ಕಳಚುವವಧಾನದಲಿ ದೃಷ್ಟಿಯ
ಬಳಿಗೆ ಕೈಮಾಡುವ [3]ವಿಘಾತಿಗೆ[3] ಜಗುಳ್ವ ಝಾಡಿಸುವ।
ಸುಳಿವ ಸಂತೈಸುವ ಸುಸಂಚದೊ
[4]ಳಳವಱಿವ[4] ವಂಚಿಸುವ ಗಮನಿಕೆ
ಯಳಬಳವನಾರೈವ ಭಟರೊದಗಿದರು ಸಮರದಲಿ॥ ೨೩

ಬಿಡುವ ಬಿಡಿಸುವ ಪರರ ಘಾಯವ
ತಡೆವ ಗೋವಃಉತ್ರಕದ ಚಿತ್ರದ
ಝಡಪದವಧಾನದ ವಿಧಾನದ ಘಾಯಬಂಡಿಗಳ।
ತುಡುಕುವವ್ವಳಿಸುವ ವಿಸಂಧಿಯ
ಹಿಡಿವ ಬಿಚ್ಚುವ ಬಿಗಿವ ಸೆಳೆವವ
ಗಡಿಸುವೌಕುವ ಕುಶಲದಲಿ ಕಾದಿದರು ಸಮರದಲಿ॥ ೨೪

ಬವರಿ ಮತ್ಸ್ಯೋದ್ಗತಿ ವಿಲಂಘನ
ವಿವಳಿತಾಂಗ ವರಾಹಮತ ಸಂ
ಪ್ಲವನ ಪಾರಿಪ್ಲವ ಗದಾಪರಿರಂಭ ವಿಕ್ಷೇಪ।
ಲವಣಿ ಲಹರಿಯುದಂಚ [5]ನವ ವಿ
ದ್ರ[5]ವಣ ಲಘುವಿನ್ಯಸ್ತವೆಂಬೀ
ವಿವರದಲಿ ಕಾದಿದರು ಕೌತುಕವೆನಲು ಸುರನಿಕರ॥* ೨೫

---

[1] ಚಾತುರ್ಯಚಪಳಪದಪ್ರಹಾರದಲಿ (ತ). [2] ಲಯ ಪಾಡಿನಲಿ (ಬ), ನವಧಾನದಲಿ (ಗ.ಟ.ದ), ನವಸಾನದಲಿ (ತ). [3] ವಿಧಾಡಿಸಿ (ಕ). [4] ಳೊಳಗಱಿವ (ತ). [5] ನವಚಿತ್ರ (ಕ), ನಸಿತತ್ರ (ಬ), ನದಲದ್ರ (ಅ), ನನವಿದ್ರ (ತ). * ಈ ಪದ್ಯ (ಫ) ಪ್ರತಿಯಲ್ಲಿಲ್ಲ.

ನೂಕಿದರೆ ಹೆಱತೆಗೆವ ಹೆಱತೆಗೆ
ದೌಕುವೌಕಿದಡೊತ್ತುವೊತ್ತಿದ
ಡಾಕೆಯಲಿ ಪಂಠಿಸುವ ಪಂಠಿಸೆ [1]ಕೂಡೆ[1] ಸಂಧಿಸುವ।
ಆ ಕಠೋರದ ಕಯ್ದು ಕಿಡಿಗಳ
ನೋಕರಿಸೆ ಖಣಿಖಟಿಲ ಝಾಡಿಯ
ಜೋಕೆಯಲಿ ಕಾದಿದರು ಸಮಬಲರಾಹವಾಗ್ರದಲಿ॥* ೨೬

ಮಱಹ ಪಡೆಯರು ಘಾಯ ಖಂಡಿಗೆ
ತೆಱಹುಗಾಣರು ಹೊಯ್ಲ ಹೋರಟೆ
ಹೊಱಗೆ ಬಿದ್ದವು ಕದ್ದವಿಬ್ಬರ ದೃಷ್ಟಿ ಮನ ಮನವ।
ಇಱುವ ಗದೆ ನೆಗ್ಗಿದವು ರೋಷದಿ
ಜಱೆವ ನುಡಿ ತಾಗಿದವು ಹೊಗಳುವ
ಡಱುಯೆನಗ್ಗದ ಭೀಮ ದುರಿಯೋಧನರ ರಣರಸವ॥ ೨೭

ಗಾಹಿನಲಿ ಗಾಢಿಸಿದ ಗದೆ ಹೊಱ
ಬಾಹೆಯಲಿ ಹಿಂಗಿದವು ಠಾಣದ
ಲೂಹಿಸಿದ ಮನ ಮುಗ್ಗಿದುದು ಕಂದೊಳಲ [2]ತೋ[2]ಹಿನಲಿ।
ಕಾಹುರದ ಹೊಯ್ಲುಗಳು ನೋಟದ
ಕಾಹಿನಲಿ [3]ಕಿಡಿಗೆದಱೆ[3] ಘಾಯದ
ಸೋಹೆಯಱುವ ಸುಜಾಣರೊದಗಿದರರಸ ಕೇಳೆಂದ॥ ೨೮

ನೆನಹು ನೆಗ್ಗಿದುದುಪ್ಪರದ ಕೈ
ಮನವ ಕಬಳಿಸಿ ತೆಱಹು ಬಱುಬಿ
ಮ್ಮನಲಿ ಬಿಗಿದುದು ತೆಗೆದವಿಬ್ಬರ ಘಾಯಘಾತಿಗಳು।
ಕೊನರ್ವ ಕೋಪದ ಕುದಿವ ಕರಣದ
ತನುವಿಗುಪ್ತಿಯ ಜಯದ ತವಕದ
ತನಿಮನದ ಕಡುತೋಟಿಕಾಱರು ಕಾದಿದರು ಕಡುಗಿ॥ ೨೯

ಜಾಣು ಜಗುಳಿತು ಹೊಯ್ಲು ಮೊನೆ [4]ಮುಂ[4]
ಗಾಣಿಕೆಗೆ ಲಟಕಟಿಸಿದುದು ಬಱ
ರೇಣುಜನನದ ಜಾಡ್ಯವೇ ಪಡಪಾಯ್ತು ಪಯುಗತಿಗೆ।

---

[1] ನೂಕಿ (ಪ.ತ). * ಈ ಪದ್ಯ (ಖ) ಪ್ರತಿಯಲ್ಲಿಲ್ಲ. [2] ಕೋ (ಕ).
[3] ಕೀಱಿದವು (ಟ.ದ). [4] ಮೊಲು (ಕ), ಮ್ಯೊ (ಖ.ಪ).

ತ್ರಾಣ ತಳವೆಳಗಾಯ್ತು ಶ್ರವ ಬಿ
ನ್ನಾಣ ಮೇಲಾಯಿತ್ತು ಕುಶಲದ
ಕೇಣದಲಿ ಕಾದಿದರು ಗದೆಗಳ ಕಿಡಿಯ ಕಿಡಿ ತಿಷಿಯ ॥ ೩೦

ವಿಲಸದಪಸವ್ಯದಲಿ [1]ರಿಪು[1]ವಾಂ
ಡಳಿಸಿ ಹೊಯ್ದ[2]ನು[2] ಸವ್ಯಮಂಡಲ
ವಲಯದಿಂದಾ ಭೀಮಸೇನನ ಹೊಯ್ಲ ಹೊಟ[3]ಬೀಸಿ[3]।
ಒಳಬಗಿದು ಕಿಬ್ಬರಿಯ ಕಂಡ
ಪ್ಪಳಿಸಿದನು ನಿನ್ನಾತನಾಚೆಯ
ದಳದ ಭಟತತಿ ಹಾಯೆನಲು ಘೋಳಿಸಿದನಾ ಭೀಮ ॥ ೩೧

ಆಗಳೇ ಸಂತೈಸಿ ರಿಪು ಕೈ
ದಾಗಿಸಿದನರಸನನು ಘಾಯದ
ಬೇಗಡೆಯಲುಚ್ಚಳಿಸಿದುದು ಬಿಸಿರಕುತ ಹುಡಿ ನನೆಯೆ।
ಆ ಗರುವನದ ಬಗೆವನೇ ಸರಿ
ಭಾಗರಕುತವನನಿಲಸುತನಲಿ
ತೂಗಿ ತೆಗೆದವೊಲಾಯ್ತು ಹೊಯ್ದನು ಪವನನಂದನನ ॥ ೩೨

ಸ್ವೈರಿಸಿದವೆರಡಂಕ ತೆಗೆದವು
ದೂರದಲಿ ದುಃಖುದುಃಖಿಪ ರಕುತದ
ಧಾರೆಗಳ ತೊಳೆದೊರಸಿದರು ಸಿರಿಖಂಡ ಕರ್ದಮವ।
ವೀರಕೇಳೀಶ್ರಮವಡಗೆ ಕ
ರ್ಪೂರ[4]ವೀಳೆಯ[4]ಗೊಂಡು ಮತ್ತೆ ಮ
ಹಾರುಭಟೆಯಲಿ ಸುಭಟರೆದ್ದರು ತೂಗಿ ನಿಜಗದೆಯ ॥ ೩೩

ಮತ್ತೆ ಹೊಕ್ಕರು ದಿಗ್ಗಜಕೆ ಮದ
ಮತ್ತದಿಗ್ಗಜ ಮಲೆತವೊಲು ಮಿಗೆ
ಹತ್ತಿದರು ಶತಮನ್ಯು ಜಂಭನ ಜೋಡಿಯಂದದಲಿ।
ತತ್ತರಿಬ್ಬರು ಮೂಕದನುಜನ
ಕೃತ್ತಿವಾಸನವೋಲು ರಣಧೀ
ರೋತ್ತಮರು ಕಯ್ಯಿಕ್ಕಿದರು ಕೌರವ ವೃಕೋದರರು ॥ ೩೪

---

[1] ಪರಿ (ಖ.ತ). [2] ರು (ಖ.ಘ.ತ). [3] ಬಿನಲ (ತ).
[4] ಕವಳವ (ಕ).

ಏನನೆಂದೆನು ಜೀಯ ಕುರುಪತಿ
ಯಾನುವನು ಕಲಭೀಮನುಬ್ಬೆಯ
ನಾನುವನು ದುರಿಯೋಧನನ ಥಟ್ಟಣೆಯನಾ ಭೀಮ।
ದಾನವರು ಮಾನವರೊಳಿನ್ನು ಸ
ಘಾನರಾರಿವರಂತೆ ಪಾಂಡವ
ರ್ಗೇನಸಾಧ್ಯವು ವೀರನಾರಾಯಣನ ಕರುಣದಲಿ॥ ೩೫

ಆಱನೆಯ ಸಂಧಿ ಮುಗಿದುದು.

# ಏಳನೆಯ ಸಂಧಿ

ಸೂಚನೆ॥ ರಾಯ ಭಾರತ[1] ವೀರರಾಯ[1]ನು
ರಾಯ[2] ವನದಾವಾನಳನು ಕಲಿ[2]
ವಾಯುತನುಜನ ಹಳಚಿ ಮಾಡಿದನು ಕೌರವರ ರಾಯ ॥

ಕೇಳು ಧೃತರಾಷ್ಟ್ರಾವನಿಪ ಕೈ
ಮೇಳವಿಸಿದರು ವಿಷಮ ಸಮರಕ
ರಾಳರೋಷಶ್ವಾಸಧೂಮಳಮುಖಭಯಂಕರರು।
ಚಾಳನದ ಚೌಪಟರು ಶಸ್ತ್ರಾ
ಸ್ಫಾಳನದ ವಜ್ರಾಭಿಘಾತಾ
ಭೀಳನಿಷ್ಠುರರೊದಗಿದರು ಕೌರವ ವೃಕೋದರರು॥ ೧

ಹಳಚಿದರು ಸುಳಿ ಘಾಳಿಯಂತಿರೆ
ಸುಳಿದು ಖಗಪತಿಯಂತೆ ಹೊಯ್ಲಲಿ
ಬಳಸಿ ಬಿಗಿದೆಱಗಿದರು ಬಿಡೆಯದ ಮತ್ತಗಜದಂತೆ।
[3]ಅಳುವಿ[3]ದರು ಶಿಖಿಯಂತೆ [4]ಚೂರಿ[4]ಸಿ
ನಿಲುಕಿದರು ಫಣಿಯಂತೆ ಪಯವ್ಯೊ
ಲುಳಿಯಲೊಲೆದರು ಪಾದರಸದಂದದಲಿ ಪಟುಭಟರು॥ ೨

ಎಱಗಿದರು ಸಿಡಿಲಂತೆ ಮಿಂಚಿನ
ಮಿಱುಗಿನಂತಿರೆ ಹೊಳೆದು ಹಜ್ಜೆಯ
ಹೆಱದೆಗೆದು ಹಾಯಿದರು ತಗರಂದದಲಿ ತವಕದಲಿ।
ಇಱುಕಿದರು ಗ್ರಹದಂತೆ ಮಿಗೆ ಮು
ಕ್ಕುಱುಕಿದರು ಮುಗಿಲಂತೆ ರೋಷಕೆ
ನೆಱೆಯದಿಬ್ಬರ ಮನವೆನಲು ಹೊಯ್ದಾಡಿದರು ಭಟರು॥ ೩

ಗದೆಗದೆಯ ಹೊಯ್ಲುಗಳ ಖಣಿಖಟಿ
ಲೊದಗಿತಿಬ್ಬರ ಬೊಬ್ಬೆ ಭುವನವ
ಬೆದಱಿಸಿತು [5]ಪದಘಟ್ಟಣೆಯ ಘಟ್ಟಣೆಯ ಘಾತಿಯಲಿ[5]।

---

[1] ಮಲ್ಲಧೀರ (ತ). [2] ರಾಜನುದಾರತೇಜನು (ತ). [3] ಅಳುಕಿ (ಕ), ಅಳಲಿ (ಖ.ತ.), ನಿಲುಕಿ (ಘ). [4] ಧೂರಿ (ಕ), ಚೂಣಿ (ಖ). [5] ಪದಘಟ್ಟಣೆಯ ಘಲ್ಲಣೆಯ ಘಾಯದಲ (ಖ), ಪದಘಟ್ಟಣೆಯ ಗಾಢದಲ ಘರ್ಜಿಸಲು (ತ).

ಅದಿರಿತಿಳೆ ಮಝು ಭಾಪು ಭಟರೆಂ
ದೊದಱಿತಾ ಪರಿವಾರದಬ್ಬರ
ತ್ರಿದಶನಿಕರದ [1]ಸಾಧುರವವಂ[1]ಜಿಸಿತು ಮೂಜಗವ॥ ೪

ಬೆರಳ ತೂಗಿದನಡಿಗಡಿಗೆ ಹಲ
ಧರನುದಗ್ರಗದಾ[2]ವಿಧಾನ[2]ಕೆ
ಶಿರವನೊಲೆದನು ಶೌರಿ ಮಿಗೆ ಮೆಚ್ಚಿದನು ಯಮಸೂನು।
ವರ ಗದಾಯುಧ ವಿವಿಧ ಸತ್ವಕೆ
ಪರಮಜೀವವಿದೆಂದನರ್ಜುನ
ನರರೆ ಮಝುರೇ [3]ರಾವು[3] ಜಾಗೆಂದುದು ಭಟವ್ರಾತ॥ ೫

ತಿವಿದನವನಿಪನನಿಲತನುಜನ
ಕವಚ ಬಿರಿದುದು ಕಯ್ಯೊಡನೆ ರಣ
ದವಕಿ ಕೈದೋಱಿದನು ಕೌರವನೃಪನ ವಕ್ಷದಲಿ॥
ಸವಗ ಸೀಳಿತು ಮರಳಿ ಹೊಯ್ದನು
ಪವನಜನ ಸೀಸಕದ ವರಮಣಿ
ನಿವಹ ಸಿಡಿದವು ಸಿಡಿಲು ಮೆಟ್ಟಿದ ಮೇರುಗಿರಿಯಂತೆ॥ ೬

ಅಡಿಗಡಿಗೆ ಕರ್ಪೂರದ ಕವಳವ
ನಡಸಿದರು ತಾಳಿಗೆಗೆ ಬಳಿಕಡಿ
ಗಡಿಗೆ ಹೆಱಸಾರಿದರು ಸಮರಶ್ರಮನಿವಾರಣಕೆ।
ಕಡುಹು ತಳಿತುದು ಪೂತು ಫಲವಾ
ಯ್ತಡಿಗಡಿಗೆ ಮಚ್ಚರದ ಮಸಕದ
ತಡಿಕೆವಲೆ ನುಗ್ಗಾಯ್ತು ಮನ ಕುರುಪತಿಯ ಪವನಜನ॥ ೭

ಶ್ವಾಸದಲಿ ಕಿಡಿಸಹಿತ ಕರ್ಬೊಗೆ
ಸೂಸಿದವು ಕಣ್ಣಾಲಿಗಳು ಕ
ಟ್ವಾಸುರದಿ ಕೆಂಪೇಱಿದವು ಬಗುಹೇಱಿ ಹುಬ್ಬುಗಳು।
ರೋಷ ಮಿಗಲೌಡೊತ್ತಿ ಬಹಳಾ
ಭ್ಯಾಸಿಗಳು ಡಾವರಿಸಿದರು ಡೊ
ಳ್ಳಾಸವೋ ರಿಪುಸೇನೆ ಕಾಣದು ಚಿತ್ರಪಯಗತಿಯ॥ ೮

[1] ಸಾಧುಕವರಂ (ಕ.ತ.ಪ), ಸಮರವೆನಲಂ (ಖ). [2] ವಿಘಾತ (ಖ.ದ).
[3] ಜಾಗು (ಖ.ಪ).

ಹೊಕ್ಕು ಕುರುಪತಿ ಭೀಮಸೇನನ
ನಿಕ್ಕಿದನು ಕಂದದಲಿ ಗದೆಯನು
ಸೆಕ್ಕಿದನು ವಾಮಾಂಗದಲಿ ಪವಮಾನನಂದನನ।
ಜಕ್ಕುಲಿಸಿದವೊಲಾಯ್ತು ಜಱಿದು ನ
ಭಕ್ಕೆ ಪುಟನೆಗೆದನಿಲಜನ [1]ಸೀ
ಸಕ್ಕೆ[1] ಹೊಯ್ದಾರಿದನು ಕೌರವನೃಪತಿ ಖಾತಿಯಲಿ ॥ ೯

ಬಾಯೊಳೊಕ್ಕುದು ರುಧಿರ ಕಂಗಳ
ದಾಯ ತಪ್ಪಿತು ಡೆಂಢಣಿಸಿ ಕಲಿ
ವಾಯುಸುತನಪ್ಪಳಿಸಿ ಬಿದ್ದನು ಕಯ್ಯ ಗದೆ ಕಳಚಿ।
ಹಾಯೆನುತ ತನ್ನವರು ಭಯದಲಿ
ಬಾಯ ಬಿಡೆ ನಿಮಿಷಾರ್ಧದಲಿ ನಿರ
ಪಾಯನೆದ್ದನು ನೋಡಿದನು ಚೇತರಿಸಿ ಕೆಲಬಲನ ॥ ೧೦

ಹೆದಱು ಹಿಂಗಿತು ನೆಲಕೆ ಮಾಱು
ದ್ದಿದನು ಕರವನು ಸೂಸಿ ಹಾಱಿದ
ಗದೆಯ ಕೊಂಡನು ಸೆಱಗಿನಲಿ ಸಂತೈಸಿ ಶೋಣಿತವ।
ಅದಿರೆ ನೆಲನವ್ವಳಿಸಿ ಮೇಲ್ವಾ
ಯಿದನು ಹೊಳಹಿನ ಹೊಯ್ಲ ಹೊದ
ರೆದ್ದುದು ವಿಘಾಡಿಸಿ ಭೀಮ ಹೊಯ್ದನು ನೃಪನ ಮಸ್ತಕವ॥ ೧೧

[2]ದೂ[2]ಟಿ ಬಿದ್ದವು ಸೀಸಕವು [3]ಶತ[3]
ಕೋಟಿ ಘಾಯದ [4]ಘಟನೆ[ಯೊಳು][4] [5]ಶತ
ಕೋಟಿ ಘಾಯಕೆ ಸಿಡಿದ[5] ಹೇಮಾಚಳದ ತುದಿಯಂತೆ।
ತಾಟಿತನು ಕಂಠದಲುಸುರ ಪರಿ
ಪಾಟಿ ತಪ್ಪಿತು ಮೃತ್ಯುವಿನ [6]ತ[6]ರ
ಚೇ[7]ಟಿ[7] ಹಿಡಿದನೊ ಹೇಳೆನಲು ಮಲಗಿದನು ಮೈಮಱೆದು॥ ೧೨

ಹಾಱಿತೊಂದೆಸೆಗಾಗಿ ಗದೆ ಮುಱಿ
ದೇಱಿದವು ಕಣ್ಣಾಲಿ [8]ನೆತ್ತಿ[8]ಯ
ಜೋಱು ಮುಸುಕಿತು ಮುಖವನೊಂದು ವಿಘಳಿಗೆ ಮಾತ್ರದಲಿ।

---

[1] ದಣುಕಿಕ್ಕಿ (ಖ), ಸಿರಿಸಕ್ಕೆ (ಟ.ದ), ಸಿರಸಕ್ಕೆ (ತ). [2] ತಾ (ಕ), ತೋ(ಖ), ದಾ (ಟ.ದ). [3] ದಶ (ಕ). [4] ಘಟನೆವೊಲು (ಕ.ಖ.ತ), ಘಲ್ಲಣೆಗೆ (ಗ.ಫ), ಘಟ್ಟಣೆಯೊಳ್ (ಟ.ದ). [5] ಘಾಯಕೆ ಸಿಡಿದ ಕುರುನೃಪನಾಟನಿಂದುದ್ಧ ಕೆಡೆದ (ಫ.ತ). [6] ಧ (ಕ), ಥ (ಟ.ದ). [7] ಟಿ (ಕ.ಖ.ಗ.ಘ). [8] ತಕ್ಕೆಯ (ಕ).

ಜಾಱಿತಂತಸ್ತ್ರಮಿ[1]ತ[1]ಭಯ ಹುರಿ
ಯೇಱಿತಧಿಕಕ್ರೋಧ ಕರಣದ
ತಾಱುಥಟ್ಟುಡಗಿದು[2]ದ[2]ಪಸರಿಸಿತನು ನಿಜಾಂಗದಲ॥ ೧೩

ನಿಮಿಷದಲ ಕಂದೆಱೆದನಂತಃ
ಶ್ರಮದ ಝುಳವಡಗಿತು ವಿಪಕ್ಷ
[3]ಭ್ರ[3]ಮಣಚೇತೋಭಾವ[4]ಭವನದ[4]ಮುಖವಿಕಾಸದಲ।
ತಮದ ತನಿಮಸಕದಲಿ ಭುಜವಿ
ಕ್ರಮ ಛಡಾಳಿಸಲೆದ್ದು ಭೂಪೋ
ತ್ತಮನು ಕೊಂಡನು ಗದೆಯುನನುವಾಗೆಂದನನಿಲಜನ। ೧೪

ಈಗ[5]ಳನುವಾದೆನೆ[5] ಧರಿತ್ರಿಯ
ಭಾಗವನು ಬೇಡಿದಡೆ [6]ನೀ ಮುಱಿ[6]
ದಾಗಳನುವಾದುದು ಕಣಾ ಗದೆ ನಿನ್ನ [7]ಕಱುದೊಡೆಗೆ[7]।
ತಾಗಿ ನೋಡಿನ್ನೊಮ್ಮೆನುತ ಮೈ
ಲಾಗಿನಲಿ ಹೊಳೆಹೊಳೆದು ಕೈದುವ
ತೂಗಿ ತುಡುಕಿದನರಸನನು ಬೊಬ್ಬಿಱಿದು ಕಲಿ ಭೀಮ॥ ೧೫

ಉಬ್ಬಬೇಡೆಲೆ ಭೀಮ ಗದೆಯೋ
ಜೊಬ್ಬೆಯೋ ಬಲುಗೈದು ನಿನ್ನಯ
ಗರ್ಭಗಿರಿಗಿದೆ ಸಿಡಿಲೆನುತ ಹೊಯ್ದನು ವೃಕೋದರನ।
[8]ತುಬ್ಬಿದನು[8] ಗದೆಯಿಂದ ಘಾಡಿಸಿ
ಹಬ್ಬಿದನು ಕೆಲಬಲಕೆ ಖತಿಯಲಿ
ಕೊಬ್ಬಿದಱೆವೊಯ್ಲುಗಳ ದನಿ ಕಿವಿಗೆಡಿಸೆ ಮೂಜಗವ॥ ೧೬

ಧರಣಿಪತಿ ಕೇಳ್ ಭೀಮಸೇನನ
ಧರಧುರದ ಹೊಯ್ಲುಗಳ ಗದೆಯಲಿ
ಹೊರಳಿಗಿಡಿ ಝೊಂಪಿಸಿದುವುರು ಖದ್ಯೋತ[9]ಮಂಡಲವ[9]।
ಅರಸನೆಱಗಿದಡನಿಲಸುತ ಪೈ
ಸರಿಸಿ ಕಳಚಿದನಾ ಕ್ಷಣದೊಳ
ಬ್ಬರಿಸಿ ಹೊಯ್ದನು ಭೀಮ ಕೌರವನೃಪನ ಕಂಧರವ॥ ೧೭

---

[1] ರ (ಫ.ಟ.ದ.ತ). [2] ದು (ಖ.ಫ.ತ). [3] ಕ್ರ (ಕ). [4] ಜೀವನ (ಕ). [5] ಳಾದನುವೆ (ಕ), ಳನುವಾದುದೇ (ಪ). [6] ಕೊಡೆನೆಂ (ಗ.ಟ.ಪ). [7] ತೊಡೆಗಳಿಗೆ (ಗ.ಟ). [8] ಎಬ್ಬಿದನು (ಕ). ತಬ್ಬಿದನು (ಗ.ತ.ಪ), ನಿಬ್ಬರದ (ಟ.ದ). [9] ದಂಬರವ (ಖ).

ನೋಡಿದನು ದಂಡೆಯಲಿ [1]ಲಾ[1]ಗಿಸಿ
ಹೂಡಿದನು ನೃಪ ಭೀಮನಲಿ ಪಯ
ಪಾಡಿನಲಿ ಪಲ್ಲಟಿಸಿದನು ಪಡಿತಳಿಸೆ ಕುರುರಾಯ ।
ಘಾಡಿಸಿದನುಪ್ಪರದ ಘಾಯಕೆ
ಕೂಡೆ ತಗ್ಗಿದನನಿಲಸುತ ಖಯ
ಖೋಡಿಯಿಲ್ಲದೆ ಭಟರು ಹೊಯ್ದಾಡಿದರು ಖಾತಿಯಲಿ ॥ ೧೮

ತೊಲಗಿ ನಿಂದರು ಮತ್ತೆ ಭಾರಿಯ
ಬಳಲಿಕೆಯ ಬೇಳುವೆಯ ಚಿತ್ತ
ಸ್ಖಲಿತರಂಗೀಕರಿಸಿದರು ಕರ್ಪುರದ ವೀಳೆಯವ ।
ಘಳಿಲನೆದ್ದರು ನಿಮಿಷಮಾತ್ರಕೆ
ಮಲೆತು ನಿಂದರು ಘಾಯ ಘಾತಿಯ
ಸುಳಿವನವಧಾನಿಸುತ ತೂಗಿದರಾಯುಧದ್ವಯವ ॥ ೧೯

ಲಾಗಿಸುತ ಲಳಿಯೆದ್ದು ಭೀಮನ
ತಾಗಿಸಿದನವನೀಶನಾತನ
[2]ಭಾಗಧೇಯ[2]ವಣೀನನೆಂಬೆನು ಹೊಯ್ಲು ಹೋಳಿಗಾಯ್ತು ।
ಬೇಗುದಿಯಲುಬ್ಬೆದ್ದು ನೃಪತಿ ವಿ
ಭಾಗಿಸಿದನನಿಲಜನ ತನ ವನು
ಬೇಗದಲಿ ಕಳಚಿದನು ಪವನಜ ಪಯದ ಬವರಿಯಲಿ ॥ ೨೦

ತಪ್ಪಿಸಿದನೇ ಘಾಯವನು ಘಡ
ತಪ್ಪಿಸಿನ್ನಾಡಡೆಯೆನುತ ಕಡು
ದರ್ಪದಲಿ ಹೊಯ್ದನು ಸಮೀರಾತ್ಮಜನನವನೀಶ ।
[3]ತಪ್ಪಿತದು ಗದೆ[3] ತನುವ ರಕುತದ
ದರ್ಪಣದ ರಹಿಯಾಯ್ತು ಗದೆ ಮಾ
ರಪ್ಪಿತರಸನ[4]ನೆನಲು[4] ಹೊಯ್ದನು ಭಾಳದಲಿ ಭೀಮ ॥ ೨೧

[5]ವಟ್ಟಿ[5] ಮುರಿದುದು ಸೀಸಕದ ಗದೆ
ನಟ್ಟುದರಸನ ನೊಸಲ ರುಧಿರದ
ಕಟ್ಟೆಯೊಡೆದಂದದಲಿ [6]ಕವಿ[6]ದುದು ನೃಪನ ತನು ನನೆಯೆ ।

[1] ಬಾ (ಷ.ತ). [2] ಭಾಗ್ಯದೈವ (ಕ), ಲಾಗುವೇಗ (ಷ.ತ). [3] ತಪ್ಪಿಸಿತು ಮಿಗೆ (ತ), ತಪ್ಪಿಸಿತು ಗದೆ (ಖ.ಫ), ಅಪ್ಪಿದುದು ಗದೆ (ಟ.ದ). [4] ನೆಂದು (ಕ). [5] ಪೊಟ್ಟು (ಖ), ವಟ್ಟು (ಟ). [6] ಸುರಿ (ಷ.ತ.

ಕೊಟ್ಟ ಘಾಯಕೆ ಬಳಲಿ ಮುಱಿವೆಗೆ
ಬಿಟ್ಟು ಮನವನು ನಿಮಿಷದಲಿ ಜಗ
ಜಟ್ಟಿ ಕೌರವರಾಯ ಕೊಂಡನು ನಿಜಗದಾಯುಧವ॥ ೨೨

ಘಾಯಗತಿ ಲೇಸಾಯ್ತು ಪೂತುರೆ
ವಾಯುಸುತ ದಿಟ ಸೈರಿಸೆನ್ನಯ
ಘಾಯವನು ಘೋರಪ್ರಹಾರಸಹಿಷ್ಣು ಗಡ ನೀನು।
ಕಾಯಲಾಪಡೆ ಫಲುಗುಣನನಬು
ಜಾಯತಾಕ್ಷನ ಕರೆಯೆನುತ ಕುರು
ರಾಯನೆಱಗಿದನನಿಲಜನ ಕರ್ಣಪ್ರದೇಶದಲಿ॥ ೨೩

ಎಡದ ದಂಡೆ[1]ಯೊಳೊತ್ತಿ[1] ಹೊಯ್ಯಲ್ಗಳ
ಕಡುಹ ತಪ್ಪಿಸಿ ಕೌರವೇಂದ್ರನ
ಮುಡುಹ ಹೊಯ್ದನು ಭೀಮ ಮರ್ಬು ಥಾಪೆನೆ ಸುರಸ್ತೋಮ।
ತಡೆದನಾ ಘಾಯವನು ಗದೆಯಲಿ
ನಡುವನಪ್ಪಳಿಸಿದನು ಭೀಮನ
ಮಿಡುಕು ನಿಂದುದು ನಗುವ ಪಾಂಡವ ಬಲದ ತಲೆ ಮಣಿಯೆ॥ ೨೪

ಒಲೆದು ಬಿದ್ದನು ಭೀಮ ಕುಲಗಿರಿ
ಮಲಗುವಂದದಲೇಱಬಾಯಿಂ
ದಿಳಿವ ಶೋಣಿತಧಾರೆ ಮುಗ್ಗುಲ ಮುಸುಕಿತವನಿಯಲಿ।
ಎಲೆ ಮಹಾದೇವಾ ವೃಕೋದರ
ನಳಿದನೇ ಹಾ ಭೀಮ ಹಾಯೆಂ
ದಳಲಿದುದು ಪರಿವಾರ ಸಾತ್ಯಕಿ ಸೃಂಜಯಾದಿಗಳು॥ ೨೫

ಮೈಮಱೆದನರೆಗಳಿಗೆ ಮಾತ್ರಕೆ
ವೈಮನಸ್ಯದ ಜಾಡ್ಯರೇಖೆಯ
ಸುಯ್ ಮಹಾದ್ಭುತವಾಯ್ತು ಪರಿಣತ ಪಾರವಶ್ಯದಲಿ।
ಹಾ ಮಹಾದೇವೆನುತ ಹಗೆವನ
ಕೈಮೆಯನು ಬಣ್ಣಿಸುತಲೆದ್ದನ
ಲೈ ಮರುತ್ಸುತ ಸೂಸಿ ಹಾಱಿದ ಗದೆಯ ತಡವರಿಸಿ॥ ೨೬

[1] ಯನೆತ್ತಿ (ಕ), ಯನೊಡ್ಡಿ (ಖ.ಟ.ದ).

ಕಾದುಕೊಳು ಕೌರವ ಗದಾ[1]ಸಂ[1]
ಭೇದ[2]ದ[2]ಭ್ಯಾಸಿಗಳಿಗಿದೆ ದು
ರ್ಭೇದ ನೋಡಾ ಹೊ[3]ಯ್ಲಿಗಿದು[3] ಮುಱಿವೊಗು ಮಹೇಶ್ವರನ।
ಹೋದೆ ಹೋಗಿನ್ನೆನುತ ಜಡಿದು ವಿ
ಷಾದಭರದಲಿ ಮುಂದುಗಾಣದೆ
ಕೈದಣಿಯಲಪ್ಪಳಿಸಿದನು ಕಲಿಭೀಮ ಕುರುಪತಿಯ॥ ೨೭

ಹಾಱಿತೊಂದೆಸೆಗಾಗಿ ಗದೆ ಮೈ
ಹೇಱಿತುರು ಘಾಯವನು ಮೊಳಕಾ
ಲೂಱಿ ಬಿದ್ದನು ವದನದಲಿ ವೆಂಠಣಿಸೆ ರಣಧೂಳಿ।
ಕಾಱಿದನು ರಕುತವನು ಕೌರವ
ನೇಱು ಬಲುಹೋ ಹೋದನೆನುತವೆ
ಚೀಱಿತಾ ಪರಿವಾರ ಸುಮ್ಮಾನದ ಸಘಾಡದಲಿ॥ ೨೮

ಭಾಪು ಮಝುರೇ ಭೀಮ ಕೌರವ
ಭೂಪವಿಲಯಕೃತಾಂತ ಕುರುಕುಲ
ದೀಪಚಂಡಸಮೀರ ಕುರುನೃಪತಿಮಿರಮಾರ್ತಾಂಡ।
ಕೋಪನಪ್ರತಿಪಕ್ಷಕುಲನಿ
ರ್ವಾಪಣೈಕಸಮರ್ಥ ಎನುತಭಿ
ರೂಪ[4]ನನು[4] ಹೊಗಳಿದರು ವಂದಿಗಳಬುಧಿ ಘೋಷದಲಿ॥ ೨೯

ಜಾಳಿಸಿದ ವೇದನೆಯ ಝೊಮ್ಮಿನ
ಜಾಳಿಗೆಯ ಜವ ಹಱಿದುದೆಚ್ಚ[5]ಱ[5]
ಮೇಲುಮುಱಿವೆಯ ಮುಸುಕು ಜಾಱಿತು ಹಾಱಿತತಿಭೀತಿ।
ಬೇಳುವೆಯ ಕರಣೇಂದ್ರಿಯದ ವೈ
ಹಾಳಿ ನಿಂದುದು ಬಿಗಿದ ಬಳಲಿಕೆ
ಯೂಳಿಗದ ಮೊನೆ ಮುಱಿಯೆ ಸಂತೈಸಿದನು ಕುರುರಾಯ॥ ೩೦

ಒಱೆವ ರಕುತವ ಧೂಳಿನಿಂದವೆ
ಹೊಱಗ ತೊಡೆತೊಡೆದೌಕಿ ಕೋಪದ
ಹೊಱಗೆ ಝಳಪಿಸೆ ಕಂಗಳಲಿ ಹುಬ್ಬಿನಲಿ ಸುಯ್ಲಿನಲಿ।

---

[1] ಶ್ರಮ (ಕ). [2] ವ (ಖ.ಘ.ಟ.ತ.ದ). [3] ಯ್ಲಿಗಿದೆ (ಕ), ಯ್ಲಿನಿದ (ಖ), ಯ್ಲನೀ (ಘ). [4] ವನು (ಕ), ದಲಿ (ಖ). [5] ಱು (ಘ.ತ).

ಮುಱುಕಿಸುವ ರಿಪುಭಟನನೋರೆಯೊ
ಳೆಱಗಿ ನೋಡುತ ಸಾರಸತ್ವದ
ನೆಱವಣಿಗೆ ಕೈಗೊಡಲೆದ್ದನು ಗದೆಯ ಕೈನೀಡಿ॥ ೩೧

ಹಾನಿಯೆಮಗಾಯ್ತೆಂದು ಕಡುಸು
ಮ್ಮಾನವುಕ್ಕಿತೆ ನಿಮಿಷದಲಿ ದು
ಮ್ಮಾನ ಶರಧಿಯೊಳದ್ದುವೆನು ತಿದ್ದುವೆನು ನಿನ್ನವರ।
ಈ ನಗೆಯನೀ ಬಗೆಯನೀ ನಿಜ
ಯಾನುರಾಗವ ನಿಲಿಸುವೆನು ಯಮ
ಸೂನು ಸೈರಿಸೆನುತ್ತ ಜಱೆದನು ವಾಮಹಸ್ತದಲಿ॥ ೩೨

ಎಲವೊ ಭೀಮ ವಿಘಾತಿಗಳ [1]ಕೈ[1]
ದೊಳ[2]ಸಿ[2]ನಲಿ ತೆಱಹಾಯ್ತು ನೀನಿ
ಟ್ಟೆಳಸುವಡೆ ನಿನಗಾದುದಾಕಸ್ಮಿಕ[ವ]ದಭ್ಯುದಯ।
ಛಲವ ಬಿಡಿಸುವಡೇಳು ನೀ ಮನ
ವಳಕುವಡೆ ನಿನ್ನವರ ಕಿಗೆ ಘೊ
ಯ್ಳೊಳಗಿದೊಂದೇ ಹೊಯ್ಲೆನುತ ಹೊಕ್ಕನು ಮಹೀಪಾಲ॥ ೩೩

ಹೊಯ್ದು ತೋಱಾ ಬಂಜೆ ನುಡಿಯಲಿ
ಬಯ್ದಡಧಿಕನೆ ಬಾಹುವಿಂ ಹೊಱ
ಹೊಯ್ದವನೊ ಮೇಣ್ ಮುಖದಲೋ ನೀನಾರು ಜಾತಿಯಲಿ।
ಕಯ್ದು ನಿನ[3]ಗಿದೆ ಲಕ್ಷ್ಯಪಣ ನಮ
ಗೆಯ್ದುವಡೆ[3] ಗುಪ್ತಪ್ರತಾಪವ
ನೆಯ್ದೆ ಪ್ರಕಟಿಸೆನುತ್ತ ತಿವಿದನು ಭೀಮ ಕುರುಪತಿಯ॥ ೩೪

ಅವನಿಪತಿ ಕೇಳ್ ಭೀಮಸೇನನ
ತಿವಿಗುಳನು ತಪ್ಪಿಸಿ ಸುಯೋಧನ
ಕವಿದು ನಾಭಿಗೆ ತೋಱಿ ಜಂಘೆಗೆ ಹೂಡಿ ಝಳಪದಲಿ।
ಲವಣಿಯಲ್ಲಿ ಲಳಿಯಿದ್ದು ಹೊಯ್ದನು
ಪವನಜನ ಭುಜಶಿರವ ಸೀಸಕ
ಕವಚವಜಿಗಿಜಿಯಾಗೆ ಬೀಳೆನುತರಸ ಬೊಬ್ಬಿಱಿದ॥ ೩೫

---

[1] ಕಂ (ಖ.ಪ.ಟ.ತ.ದ). [2] ಲಿ (ಪ.ಟ.ದ.ತ). [3] ಗಿದು ಲಕ್ಷಪಣವೆಮಗೈದು ಮಡಿ (ಖ), ಗೀ ಸಮರಮುಖದಲ ಐದುವಡೆ (ಟ.ದ).

ಮತ್ತೆ ಹೊಯ್ದನು ಭೀಮಸೇನನ
ನೆತ್ತಿಯನು ನಿಪ್ಪಸರದಲಿ [1]ಕಳೆ[1]
ಹತ್ತಿ ಝೋಂಪಿಸಿ ತಿರುಗಿ ಬಿದ್ದನು ಬಿಗಿದ ಮೂರ್ಛೆಯಲಿ।
ಕೆತ್ತ ಕಂಗಳ ಸುಯ್ಲ ಲಹರಿಯ
ಸುತ್ತಲೊಗುವರುಣಾಂಬುಗಳ ಕೆಲ
ದತ್ತ [2]ಸಿಡಿದಿಹ[2] ಗದೆಯ ಭಟನೊಱಗಿದನು [3]ಮಱವೆ[3]ಯಲಿ॥ ೩೬

ಮಡಿದವನ ಹೊಯ್ಯೆನು ಧನಂಜಯ
ತೊಡು ಮಹಾಸ್ತ್ರವನವನಿಪತಿ ಬಿಲು
ದುಡುಕು ಯಮಳರು ಕೈದುಗೊಳಿ ಸಾತ್ಯಕಿ ಶರಾಸನವ।
ಹಿಡಿ ಶಿಖಂಡಿ ದ್ರುಪದಸುತರವ
ಗಡಿಸಿರೈ ನಿಮ್ಮವನ ಹರಿಬಕೆ
ಮಿಡುಕುವಡೆ ಬಹುದೆನುತ ತೂಗಿದನವನಿಪತಿ ಗದೆಯ॥ ೩೭

ಮೇಲೆ ಕಳವಳವಾಯ್ತು ದಿಕ್ಕಿನ
ಮೂಲೆ ಬಿರಿಯೆ ಪಿಶಾಚರಾಕ್ಷಸ
ಜಾಲ ವಿದ್ಯಾಧರ ಮಹೋರಗ ಯಕ್ಷ ಕಿನ್ನರರು।
ಆಳು ನೀನಹೆ ನಳ ನಹುಷ ಭೂ
ಪಾಲಕುಲದಲಭಂಗನಾದೆ ಕ
ರಾಳಭುಜಬಲ ನೀನೆನುತ ಕೊಂಡಾಡಿತಮರಗಣ॥ ೩೮

ಅರಸ ಕೇಳಾಶ್ಚರಿಯವನು ನಿ
ಮ್ಮರಸನಾಹವ ಸಫಲ ಸುರಕುಲ
ವರಳ ಮಳೆಗಱೆದುದು ಕಣಾ ಕುರುಪತಿಯ ಸಿರಿಮುಡಿಗೆ।
ಅರಿನೃಪರು ತಲೆಗುತ್ತಿದರು ಮುರ
ಹರ ಯುಧಿಷ್ಠಿರ ಪಾರ್ಥ ಯಮಳರು
ಬೆರಳ ಮೂಗಿನಲಿದ್ದು ಸುಯ್ದರು ಬಯ್ದು ದುಷ್ಕೃತವ॥ ೩೯

ಮಿಡಿದನರ್ಜುನ ಧನುವ ಯಮಳರು
ತುಡುಕಿದರು ಕಯ್ದುಗಳ ಸಾತ್ಯಕಿ
ಮಿಡುಕಿದನು ಮಱುಗಿದರು ಪಂಚದ್ರೌಪದೀಸುತರು।

---

[1] ಕಳ (ಕ), ತಲೆ (ಖ), ಬಳೆ (ತ). [2] ಸಡಲಿದ (ಕ), ಸೀರಿದ (ಖ), ಜಾರಿದ (ಟ,ದ). [3] ಮೂರ್ಛೆ (ಕ).

ಒಡೆಯನಳಿವಿನಲೆಲ್ಲಿಯದು ನೃಪ
ನುಡಿದ ನುಡಿಯೆನುತನಿಲತನುಜನ
ಪಡೆ ಗಜಾಶ್ವವ ಬಿಗಿಯೆ ಗಜಬಜಿಸಿತು ಭಟಸ್ತೋಮ॥ ೪೦

ದುಗುಡದಲಿ ಹರಿ ರೌಹಿಣೇಯನ
ಮೊಗವ ನೋಡಿದಡಾತನಿದು ಕಾ
ಳಗವಲೇ ಕೃತಸಮಯರಾದಿರಿ ಪೂರ್ವಕಾಲದಲಿ।
ಹಗೆಯ ಬಿಡಿ ಕುರುಪತಿಯ ಸಂಧಿಗೆ
ಸೊಗಸಿ ನಿಲಲಿ ಯುಧಿಷ್ಠಿರನ ಮಾ
ತುಗಳ ಕೆಡಿಸದಿರೆಂದನಾ ಕೃಷ್ಣಂಗೆ ಬಲರಾಮ॥ ೪೧

ಅರಸ ಕೇಳ್ಬಿ ಬಿದ್ದ ಭೀಮನ
ಹೊರೆಗೆ ಬಂದರ್ಜುನನು ಮೋಹೆಗೆ
ಬೆರಳನೊಡ್ಡಿ ಸಮೀರನಂದನನುಸುರನಾರೈದು।
ಮರಳಿದನು ಮುರಹರನನೆಕ್ಕಟಿ
ಗರೆದು ಸಪ್ರಾಣನು ಗದಾನಿ
ರ್ಘರಪರಿಶ್ರಮ ಭೀಮ ಬಳಲಿದನೆಂದನಾ ಪಾರ್ಥ॥ ೪೨

ದೇವ ಬೆಸಸಿನ್ನನಿಲಸೂನು ಸ
ಜೀವನಹಿತನಿಬ[1]ರ್ಹಣ ಪ್ರ
ಸ್ತಾವವನು[1] ಕರುಣಿಸುವುದಾ[2]ತನ[2] ಧರ್ಮವಿಕೃತಿಗಳ।
ನೀವು ಕಂಡಿರೆ ನಾಭಿ ಜಂಘೆಗೆ
ಡಾವರಿಸಿದನು ಹಲವು ಬಾರಿ ಜ
ಯಾವಲಂಬನವೆಂತು ಕೃಪೆಮಾಡೆಂದನಾ ಪಾರ್ಥ॥ ೪೩

ನೀವು ಮೊದಲಲಿ ಬೆಸಸಿದಿರಿ ಮಾ
ಯಾವಿಗಳ ಮಾಯೆಯಲಿ ಗೆಲುವುದು
ದೈವಕೃತಿಯದು ರಾಜ[3]ಮಂತ್ರ[3]ದ ಸಾರತರವೆಂದು।
ಈ ವಿರೋಧಿಯ ಧರ್ಮಗತಿ ಸಂ
ಭಾವ[4]ವ[4]ನು ಕರ್ತವ್ಯಭಾವವ
ನೀವು ಬಲ್ಲಿರಿಯೆಂದನರ್ಜುನದೇವ ವಿನಯದಲಿ॥ ೪೪

---

[1] ರ್ಹ ಪ್ರಾಣಸ್ಥಾನವನು (ಖ), ನಿಜ ಪ್ರಬಹಳ ಸ್ತೋಮವನು (ಘ).
[2] ನತ (ಘ). [3] ಧರ್ಮ (ಟ.ದ). [4] ಕ (ಖ.ಟ.ದ).

ಧಾತುಗೆಟ್ಟನು ಭೀಮ ಮುಸುಕಿತು
ಭೀತಿ ನಮ್ಮೆಲ್ಲ[1]ರನು[1] ದೈವ
ವ್ರಾತವಾತನ ಕೊಂಡು ಕೂನರಿತು ಹೊಯ್ದು ಹೂಮಳೆಯ।
ಪಾತಕಕೆ ಪಡಪಾಗದಮಳ
ಖ್ಯಾತಿ ನೋಯದೆ ವಿಜಯಸಿರಿ ರಾ
ಗಾತಿಶಯದಲಿ ನಮ್ಮ ರಮಿಸುವ ದೆಸೆಯ ಬೆಸಸೆಂದ॥ ೪೫

ಅನಿಲಸುತ ಸಪ್ರಾಣಿಸಲಿ ರಿಪು
ಜನಪನೂರುವಿಭಂಗವೇ ಮು
ನ್ನಿನ ಪ್ರತಿಜ್ಞೆಯಲಾ ಸಭಾಮಧ್ಯದಲಿ ಕುರುಪತಿಯ।
ನೆನಸಿಕೊಡಿ ಸಾಕಿನ್ನು ಬೇಱೊಂ
ದನುನಯವು ತಾನೇನು ವಿಜಯಾಂ
ಗನೆಗೆ ದ್ರುಪದಕುಮಾರಿ ತಪ್ಪದೆ ಸವತಿಯಹಳೆಂದ॥ ೪೬

ಅರಸ ಕೇಳಾಕ್ಷಣದೊಳನಿಲ
ಸ್ಮರಣೆಯನು ಹರಿ ಮಾಡಿದನು [2]ಸಂ
ಚರಿಸಿದನು ತತ್ತನುಜನಂ[2]ಗೋಪಾಂಗವೀಥಿಯಲಿ।
[3]ತರತರ[3]ದ ನಾಡಿಗಳೊಳಗೆ ವಿ
ಸ್ತರಿಸಿ ಮೂಲಾಧಾರದಲಿ ಚೇ
ತರಿಸಿ ಸರ್ವಾಂಗದಲಿ ಜೀವಸಮೀರ ಪಸರಿಸಿದ॥ ೪೭

ತ್ರಾಣವಿಮ್ಮಡಿಯಾಯ್ತು ತಿರುಗಿದ
ಗೋಣು ಮರಳಿತು ರೋಷವಹ್ನಿಗೆ
ಸಾಣೆವಿಡಿದವೊಲಾಯ್ತು ಕಣ್ಣುಗುಳಿದುವು ಕೇಸುರಿಯ।
ಠಾಣವೆಡಹಿದ ಗದೆಯ ರಣಬಿ
ನ್ನಾಣ [4]ಮಸುಳಿದ ಮಾನಮರ್ದನ[4]
ದೂಣೆಯದ ಸವ್ಯಥೆಯ ಭಟ ಸಂತೈಸಿದನು ತನುವ॥ ೪೮

ಕೊಡಹಿದನು [5]ತನು[5]ಧೂಳಿಯನು ಧಾ
ರಿಡುವ ರುಧಿರವ ಸೆಱಗಿನಲಿ ಸಲೆ
ತೊಡೆತೊಡೆದು ಕರ್ಪುರದ ಕವಳವನಣಲೊಳಳವಡಿಸಿ।

---

[1] ರಿಗೆ (ಕ). [2] ಪರಿಹರಿಸಿತೀತನ ಮೂರ್ಛೆಯಂ (ಖ). [3] ತರಹರ (ಖ).
[4] ಸುಳಿದನು ಮಾನಗರ್ವದ (ಕ), ವಸುವಿನ ಮಾನಮರ್ದನ (ತ). [5] ರಣ (ಕ).

ತೊಡೆಯ ಹೊಯ್ಲಾರುವ ಮುರಾರಿಯ
ನೆಡೆಯುಡುಗದೀಕ್ಷಿಸುತ ದೂರಕೆ
ಸಿಡಿದ ಗದೆಯನು ತುಡುಕಿ ನೃಪತಿಯ ತೊಡೆಗೆ ಲಾಗಿಸಿದ ॥ ೪೯

ಭಾಷೆಗಳುವರು ಪಾಂಡುಸುತರೆಂ
ಬಾಸೆಯಲಿ ನಿನ್ನಾತ ಮೈಮಱೆ
ದೋಸರಿಸದಿದಿರಾದನೂರುದ್ವಯವ[1] ವಂಚಿಸದೆ[1] ।
ಶ್ವಾಸ ಮರಳಿತೆ ನಿನಗೆ ಯೋಗಾ
ಭ್ಯಾಸಿಯಹೆಯೋ ಭೀಮ ಸೈರಣೆ
ಲೇಸು ಮೆಚ್ಚಿದೆನೆನುತ ನೃಪನೆಱಗಿದನು ಪವನಜನ ॥ ೫೦

ಹೊಯ್ದ ಲಳಿಯಲಿ ಕರಣಗತಿಯಲಿ
ಹಾಯ್ದು ನಭಕುಪ್ಪರಿಸಿ ಮರಳಿದು
ಹೊಯ್ದು ಹಿಂಗುವ ನೃಪನ ತೊಡೆಗಳನಿಟ್ಟನಾ ಭೀಮ ।
ಹಾಯ್ದು ಗದೆ ಹೆದ್ದೊಡೆಗಳನು ಮುಱಿ
ದಯ್ದಿತವನಿಯನರುಣಜಲದಲಿ
ತೊಯ್ದು ಧೊಪ್ಪನೆ ಕೆಡೆದನಿಳೆಯಲಿ ಕೌರವರ ರಾಯ ॥ ೫೧

ಹಾರ ಹಱಿದುದು ಕರ್ಣಪೂರದ
ಚಾರು ಮೌಕ್ತಿಕನಿಕರ ಸಿಡಿದವು
ಧಾರಿಡುವ ರಕ್ತಾಂಬು ಮಡುಗಟ್ಟಿದುದು ಮಗ್ಗುಲಲಿ ।
ವೀರ ಭೀಮಾ ಮಝು ಎನುತ ಬಲ
ವಾರಿದುದು ನಿಸ್ಸಾಳ ಸೂಳಿನ
ವೀರಪಣಹದ ಲಗ್ಗೆ ಮಸಗಿತು ಪರರ ಥಟ್ಟಿನಲಿ ॥ ೫೨

ಬಿದ್ದನೈ ನಿನ್ನಾತನಿನ್ನೇ
ನೆದ್ದರೈ ದಾಯಿಗರು ಜೂಜನು
ಗೆದ್ದುದಕೆ ಫಲ ಬಂದುದೇ ಸಂಧಾನದಲಿ ಛಲವ ।
ಹೊದ್ದಿತಕೆ ಹುಲಿಸಾಯ್ತು ಬಲುವಗೆ
ಬಿದ್ದನೆಂದುಳುಹಿದನೆ ಪವನಜ
ನುದ್ದುರುಟುತನಕೇನನೆಂಬೆನು ಭೂಪ ಕೇಳೆಂದ ೫೩

[1] ಕೆ ಚಿಂತಿಸದೆ (ಕ).

ಏಕೆ ಸಂಜಯ ಕೌರವೇಂದ್ರನ
ಸಾಕಿತಕೆ ಫಲವಾಯ್ತು ನೀ ಬಱಿ
ದೇಕೆ ಚಿಂತ್ಸುವೆ ಕಾಸಿ ಬಾದಣಗೊಱೆದ ಘಾಯದಲಿ।
ನೂಕಿದರೆ ಬಲಭದ್ರನನು [1]ಮೇ
ಲೇಕೆ[1] ಪವನಜ ಮುನಿದನವರ
ವ್ಯಾಕುಳರಲೇ ವೀರನಾರಾಯಣನ ಕರುಣದಲಿ॥ ೫೪

ಏಳನೆಯ ಸಂಧಿ ಮುಗಿದುದು.

---

[1] ಬಳಿಕೇಕೆ (ಟ), ಸಲೆಯಾಕೆ (ಘ.ತ).

# ಎಂಟನೆಯ ಸಂಧಿ

ಸೂಚನೆ॥ ಕೆಡೆದ ಕೌರವನೃಪನ ನೇಮವ
ಪಡೆದು ಕೃಪ ಕೃತವರ್ಮ ಗುರುಸುತ
ರೊಡನೆ ಬಂದರು ಸಾರಿದರು ಪಾಂಡವರ ಪಾಳೆಯವ।

ಕೇಳು ಧೃತರಾಷ್ಟ್ರಾವನೀಶ ಕ
ರಾಳ ಲೋಹಗದಾಭಿಹತಿಗೆ ನೃ
ಪಾಲ ಬಿದ್ದನು ಭಾರತದ [1]ದುಸ್ಸಂಗಭಂಗದಲಿ[1] ।
ಮೇಲೆ ಚಾರಣ ಸೂತ ಮಾಗಧ
ಜಾಲ ಹೊಗಳಿತು ಗರುವ ಕುರುಭೂ
ಪಾಲ ಗಂಡಿಗನಕಟೆನುತ ಕೊಂಡಾಡಿತಮರಗಣ॥ ೧

ಏನನೆಂಬೆನು ಜೀಯ ಮಹಿಯಲಿ
ಮಾನನಿಧಿ ಮಲಗಿದನಲೈ ತವ
ಸೂನು ರುಧಿರದ ತಿಲಕವಾದನಲೈ ಧರಾಂಗನೆಗೆ।
ಭಾನುಮತಿ ವೈಧವ್ಯವಿಧಿಗಿ
ನ್ನೇನ ನೋಂತಳೊ ರಾಜರವಿಯವ
ಸಾನಸಮಯದೊಳಾದುದದ್ಭುತವರಸ ಕೇಳೆಂದ॥ ೨

ನಡುಗಿತಿಳೆ ನಿ[2]ರ್ಘಾತ[2]ದಲಿ ಬಱ
ಸಿಡಿಲು ಸುಳಿದುದು ನೆಣನ ಬಸೆಸಹಿ
ತಡಗು ಸುರಿದವು ಕದಡಿ ಹರಿದುದು ರಕುತದಱೆವೊನಲು।
ಸಿಡಿದವಱೆಗಳು ಕೆಱೆಗಳುಕ್ಕಿದ
ವಡಿಗಡಿಗೆ ಹೆಮ್ಮರ ನಿವಾತದ
ಲುಡಿದು ಬಿದ್ದವು ಕೌರವೇಂದ್ರನ ಪತನ ಕಾಲದಲಿ॥ ೩

ಬೀಸಿದುದು ಬಿಱುಗಾಳಿ ಕತ್ತಲೆ
ಸೂಸಿದುದು ದಿಗುವಳಯದಲಿ ಪರಿ
ವೇಷದಲಿ ಗ್ರಹ ನೆರೆದವೈದಾಱೇಳು ರವಿಯೊಡನೆ।

[1] ದುಸ್ಸಂಗಿ ಭಂಗಿಯಲಿ (ಘ), ರಣರಂಗಮಧ್ಯದಲಿ (ಟ). [2] ಮೇಘ (ಱ).

ಸೂಸಿದವು ಹಗಲುಳುಕು ಮೃಗಗಣ
ವಾಸುರದಲೊದಱಿದವು ಕಂದಿತು
ವಾಸರಪ್ರಭೆ ಕೌರವೇಂದ್ರನ ಪತನ ಕಾಲದಲಿ॥ ೪

ಒಱೆ ಸಹಿತ ಕಯ್ದುಗಳು ಕರದಿಂ
ಮುಱಿದು ಬಿದ್ದವು ಗಜಹಯದ ಕ
ಣ್ಣೊಱತೆಯೆದ್ದವು ಕಡಿದು ಬಿದ್ದವು ಧ್ವಜಪತಾಕೆಗಳು।
ತುಱುಗಿದಂತಸ್ತಾಪದಲಿ ಮನ
ಮಱುಗಿತಾ ಪರಿವಾರ ಸುಭಟರಿ
ಗಱುಹಿತಾಕಸ್ಮಿಕದ ಭಯ[1]ವವನೀಶ[1] ಕೇಳೆಂದ॥ ೫

ದ್ರುಪದತನುಜ ಶಿಖಂಡಿ ಸೃಂಜಯ
ನೃಪ ಯುಧಾಮನ್ಯೂತ್ತಮೌಂಜಸ
ಚಪಳಪಂಚದ್ರೌಪದೀಸುತ ಸೋಮಕಾದಿಗಳು।
ಅಪದಶಾವಿರ್ಭೂತಚೇತಃ
ಕೃಪಣರತಿಚಿಂತಿಸಿದರಂದಿರು
ಳುಪಹತಿಯ ಸೂಚಿಸುವ ವಾಮಭುಜಾಕ್ಷಿಕಂಪದಲಿ॥ ೬

ಅವನಿಪತಿ ಕೇಳೀಚೆಯಲಿ ಕೌ
ರವನ ಹೊರೆಗೈತಂದು ನಿಂದನು
ಸವಡಿಗೈಗದೆಯಣಸುಗಲ್ಲದ ಗಾಢಗರ್ವದಲಿ।
ಪವನಸುತ ನುಡಿಸಿದನಲೈ ನಿ
ನ್ನವನನೇನೈ ಭೂಪ ಕೊಡುವೈ
ನವಗೆ ನೆಲನರ್ಧವನು ನಾಚಿಕೆಯೇಕೆ ನುಡಿಯೆಂದ ॥ ೭

ಊರ ಬೇಡಿ[2]ದಡೈದ ನಾವೆರ
ಡೂರುಗಳನೇ ಕೊಂಡೆವೈ[2]ನಿಜ
ಧಾರುಣಿಯ ಕೊಡೆನೆಂದಲೈ ಸೂಚ್ಯಾಗ್ರಸಮ್ಮಿತವ ।
ನಾರಿ ಋತುಮತಿಯೆಂದಡೆಯು ಸುಲಿ
ಸೀರೆಗಳನೆಂಬಗ್ಗಳಿಕೆ ಕಾ
ಸಾರದಲಿ ಕರಗಿತೆ ಸುಯೋಧನ ಎಂದನಾ ಭೀಮ ॥ ೮

---

[1] ಭೂಪಾಲ (ಖ.ತ). [2] ದೆವೈದನಿನ್ನೆರಡೂರುಗಳನೇ ಕೊಟ್ಟೆಯ್ಯೊ (ಟ.ದ).

ಎತ್ತಿ ಕಳೆದ್ಯೆ ಬನಕೆ ನಾವ್ ನಿ
ಮ್ಮೆತ್ತುಗಳಲ್ಯೆ ಬೆರಳಲೇಡಿಸಿ
ದೆತ್ತುಗಳ ಕೂಡೇಕೆ ಸರಿನುಡಿ ಸಾರ್ವಭೌಮರಿಗೆ ।
ಇತ್ತಲೇತಕೆ ಬಿಜಯಮಾಡಿದಿ
ರೊತ್ತದೇ ಕಲುನೆಲನು ಪವಡಿಸಿ
ಮತ್ತೆ ತೊಡೆಗಳ ತಿವಿಯ[1]ಬೇಕೇ ಎಂ[1]ದನಾ ಭೀಮ ॥ ೯

[2]ಕೃತ್ರಿಮವ ನಿರ್ಮಿಸಿದ[2] ಫಲ ಕೈ
ವರ್ತಿಸಿತೆ ನೀವರಗುಮನೆಯಲಿ
ಹೊತ್ತಿಸಿದ ಫಲ ಬಂದುದೇ ವ್ಯವಧಾನವಾದುದಲೆ ।
ಬಿತ್ತಿದಿರಿ ವಿಷಬೀಜವನು ನೆಱೆ
ದತ್ತ ಫಲ ಕೈಸಾರ್ದುದಾದಡೆ
ಕೆತ್ತುಕೊಂಡಿರಲೇಕೆ ನುಡಿ ತನ್ನಾಣೆ ನುಡಿಯೆಂದ ॥ ೧೦

ಸಂದುದೇ [3]ನೀ ಮೆ[ಚ್ಚೆ][3] ಸಭೆಯಲಿ
ಹಿಂದೆ ಮಾಡಿದ ಭಾಷೆ ಕುರುಡನ
ನಂದನರನಿಮ್ಮಡಿಸಿದ್ಯೆವತ್ತನು ರಣಾಗ್ರದಲಿ ।
ಕೊಂದು ದುಶ್ಶಾಸನನ ಖಂಡವ
ತಿಂದು ರಕುತವ ಕುಡಿದು ಬಲುಗದೆ
ಯಿಂದ ನಿನ್ನಯ ತೊಡೆಯನುಡಿದೆನೆ ಭೂಪ ಹೇಳೆಂದ ॥ ೧೧

ರಾಯನಾಸ್ಥಾನದಲಿ ಖೂಳರ
ರಾಯ ನೀನೇ ಭಂಗಪಡಿಸಿ ನ
ವಾಯಿಯಲಿ ನಿಮ್ಮೂರಿಗೆಮ್ಮೈವರನು ನೀ ಕರಸಿ ।
ವಾಯದಲಿ ಜೂಜಾಡಿ ಕಪಟದ
ದಾಯದಲಿ ಸೋಲಿಸಿ ಯುಧಿಷ್ಠಿರ
ರಾಯನರಸಿಯ ಸುಲಿಸಿತಕೆ ಫಲವಾಯ್ತು ಹೇಳೆಂದ ॥ ೧೨*

---

[1] ಜೇಕಿನ್ನೆಂ (ಕ), ಲೇಕಿನ್ನೆಂ (ಟ.ದ). [2] ಕೃತ್ತಿಯನು ನಿರ್ಮಿಸಿದ (ಕ), ಕೃತ್ರಿಮವ ನೆಮ್ಮಿಸಿದ (ಖ), ಕೃತ್ರಿಮದಿ ವಿಷವಿಕ್ಕಿದಾ (ತ). [3] ನಿಂಮಿಛೆ (ಕ.ತ), ನಿಂಮಿಚ್ಛೆ (ಘ), ನೀವೆಚ್ಚಿ (ಖ.ಟ). * ಈ ಪದ್ಯವಾದಮೇಲೆ (ಟ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—

ಬಿರುದ ಬಿಡು ಕುರುರಾಯ । ಹರಣವನು ಕಾಯ್ವೆನು ಯುಧಿಷ್ಠಿರ
ನರಪತಿಯ ಪದದಾಣೆಯೆಂದನು ಭೀಮ ನೊಗ ನೆಗಹಿ ।
ಮರುಳೆ ಕೇಳ್ ಮದವಳಿತದಲಿ ತ । ತ್ಕರಗದಾಮೃತವೆಂದು ವಿಧಿ ನಿ
ಬ್ಬರದಿ ಬರೆದುದು ಬಿರುದ ಬಿಡುವುದ ಬರೆದುದಿಲ್ಲೆಂದ ॥

ಹಳುವದಲಿ ನಾನಾಪ್ರಕಾರದ
ಲಳಲಿಸಿದ ಫಲಭೋಗವನು ನೀ
ತಲೆಯಲೇ ಧರಿಸೆನುತ ವಾಮಾಂಘ್ರಿಯನು ಮಕುಟದಲಿ।
ಇಳುಹಿದನು ಗೌರ್ಗೌವೆನುತ ಬಿಡ
ದುಲಿದೆಲಾ ಎನುತೊದೆದು ಮಕುಟವ
ಕಳಚಿದನು ಕೀಲಣದ ಮಣಿಗಳು ಕೆದಱೆ ದೆಸೆದೆಸೆಗೆ॥ ೧೩

ಹಿಂದಣಪರಾಧವನು ಲೆಕ್ಕಿಸು
ತೊಂದೆರಡು ಮೂಱಾಯ್ತು ನಾಲ್ಕೈ
ದೆಂದು ಮೆಟ್ಟಿದನವನಿಪಾಲನ ಮಕುಟಮಸ್ತಕವ।
ಇಂದುಮುಖಿಯನು ಬೂತುಗೆಡೆದುದ
ಕೊಂದು ಘಾಯವ ಕೊಳ್ಳೆನುತ ಮಡ
ದಿಂದ ವದನವನೊದೆದು ಹಲುಗಳ ಕಳಚಿದನು ಭೀಮ॥ ೧೪

ಉಚಿತವೆಂದರು ಕೆಲರು ಕೆಲರಿದ
ನುಚಿತವೆಂದರು ಪೂರ್ವಜನ್ಮೋ
ಪಚಿತ ದುಷ್ಕೃತವೈಸಲೇ ಶಿವ ಎಂದು ಕೆಲಕೆಲರು।
ಖಚರ ಕಿನ್ನರ ಯಕ್ಷ ನಿರ್ಜರ
ನಿಚಯ ಭೀಮನ ಬೈದು ಕುರುಪತಿ
ಯಚಳ ಬಲವನು ಬಣ್ಣಿಸುತ ಹೊಕ್ಕರು ನಿಜಾಲಯವ॥ ೧೫

ಭೀಮ ಹಾ ಹಾ ಕಷ್ಟವಿದು ಸಂ
ಗ್ರಾಮಜಯವೇ ಸಾಲದೇ ಕುರು
ಭೂಮಿಪತಿಯಶ್ಲಾಘ್ಯನೇ ಲೋಕೈಕಮಾನ್ಯನಲಾ।
ನೀ ಮರುಳಲಾ ಸಾರೆನುತ ತ
ತ್ಸೀಮೆಗೈತಂದನಿಲತನುಜನ
ನಾ ಮಹೀಪತಿ ನೂಕಿ ಸಂತೈಸಿದನು ಕುರುಪತಿಯ॥ ೧೬

ಗುಣನಿಧಿಯನೇಕಾದಶಾಕ್ಷೋ
ಹಿಣಿಯ ಪತಿಯನಶೇಷ ಪಾರ್ಥಿವ
ಮಣಿಮಕುಟ ಕಿರಣೋಪಲಾಲಿತ ಪಾದಪಲ್ಲವನ।
ರಣದೊಳನ್ಯಾಯದಲಿ ತೊಡೆಗಳ
ಹಣಿದುದಲ್ಲದೆ ಪಾದದಲಿ ನೀ
ಕೆಣಕುವರೆ ಕುರುರಾಜಮೌಳಿಯನೆಂದನಾ ಭೂಪ॥ ೧೭

ಅನುಜರಳಿದುದು ನೂಱು ರಣದಲಿ
ತನುಜರಳಿದುದು ಮಾವ ಗುರು ಮೈ
ದುನ ಪಿತಾಮಹ ಪುತ್ರ ಮಿತ್ರ ಜ್ಞಾತಿ ಬಾಂಧವರು ।
ಅನಿಬರವನೀಶ್ವರರು ಸಮರಾ
ವನಿಯೊಳಡಗಿದುದೇಕದೇಶದ
ಜನಪತಿಯ ಮುಱಿದುದುವೆ ಸಾಲದೆ ಭೀಮ ನಮಗೆಂದ ॥ ೧೮

ಆವ ಮೋಱೆಯೊಳಪ್ಪದೇವರ
ನಾವು ನೋಡುವೆವವ್ವೆಯರ ಸಂ
ಭಾವಿಸುವೆವಾವಂ[1]ಗ[1]ದಲಿ ಗಾಂಧಾರಿ ಕಡುಗೋಪಿ ।
ದೇವಿಯರುಗಳ ಶೋಕವಹ್ನಿಯ
ನಾವ ವಿಧದಲಿ ನಿಲಿಸುವೆವು ಕಾಂ
ತಾವಳಿಗಳೇನೆಂದು ಬಯ್ಯರು ಭೀಮ ಹೇಳೆಂದ ॥ ೧೯

[2]ಅಳಲಿದತಿಭಂಗಿಸಲು[2] ಪರಮಂ
ಡಳಿಕರೇ ನಾವ್ ಪಾಂಡುವಿನ ಮ
ಕ್ಕಳುಗಳಾ ಧೃತರಾಷ್ಟ್ರ ತನುಸಂಭವರು ಕೌರವರು ।
ನೆಲನ ಹುದುವಿನ ದಾಯಭಾಗದ
ಕಳವಳದೊಳಾಯ್ತಲ್ಲದುಳಿದಂ
ತೊಳಗು ಭಿನ್ನವೆ ಭೀಮ ಬಿಡು ಭಂಗಿಸದೆ ಸಾರೆಂದ ॥ ೨೦

ಸ್ವೈರಿಸೆಮ್ಮಪ[3]ರಾಧ[3]ವನು ಕುರು
ವೀರ ಸಂಚಿತಪಾಪಕರ್ಮವಿ
ಕಾರವಿದು [4]ಭೋಗಾದಿ ನಿನಗೆಂ[4]ದರಸ ದುಗುಡದಲಿ ।
ನೀರೊಱೆವ ಕಣ್ಣುಗಳನೊರಸುತ
ಸೀರೆಯಲಿ ಗದಗದಿತ ಗಳದಲಿ
ಸಾರಹೃದಯ ಮಹೀಶನದ್ದನು ಖೇದಪಂಕದಲಿ ॥ ೨೧

ಕಂಡನೀವ್ಯ[5][ತಿ][5]ಕರವನರಸನ
ಮಂಡೆಯಂಘ್ರಿಯ ಭೀಮಸೇನನ
ದಂಡಿಯನು ದಟ್ಟಯಿಸೆ ಸುಯಿ ದಳ್ಳುರಿಯ ಚೂಣಿಯಲಿ ।

---

[1] ದ (ಘ.ತ). [2] ಅಳವಿನಲಿ ಭಂಗಿಸಲು (ಖ), ಅಳಲಿನಲಿ ಭಂಗಿಸಲು (ಘ.ತ.ಪ). [3] ಕಾರ (ಕ). [4] ಭೋಕ್ತವ್ಯ ನಿನಗೆಂ (ಟ), ಭೋಗೈಕಫಲವೆಂ (ಪ). [5] ಥಿ (ಸ).

ಗಂಡುಗೆದಱಿದ ರೋಷಶಿಖಿ ಹುರಿ
ಗೊಂಡುದಕ್ಷಿಗಳೆಲಿ ವೃಕೋದರ
ಕೊಂಡನೇ ತ[1]ಪ್ಪೇನೆ[1]ನುತ ನಿಂದಿದ್ದನಾ ರಾಮು॥ ೨೨

ಎಲವೆಲವೊ ಪಾಂಡವರಿರಾ ನೀ
ವಳುಪಿದಿರಲಾ [2]ನಾಭಿ[2]ಯಿಂದವೆ
ಕೆಳಗೆ ಕೈಮಾಡುವುದು ಸಲ್ಲದು ಗದೆಯ ಕದನದಲಿ।
ಚಲಿಸಲಾಗದು ಧರ್ಮನಿರ್ಣಯ
ದೊಳಗಿದೊಂದೇ ಭಾಷೆ ಮಾಡಿದಿ
[3]ರಳಿದಿರ[3]ನ್ಯಾಯದಲಿ ಕೊಂದಿರಿ ಕೌರವೇಶ್ವರನಾ॥ ೨೩

ನೀವು ಮಾಡಿದ ಸತ್ಯಭಾಷೆಗೆ
ನೀವಲಾ ತಪ್ಪಿದಿರಿ ನೋಟಕ
ರಾವು ಮಧ್ಯಸ್ಥರಲೇ ಧರ್ಮೈಕರಕ್ಷಕರು।
ನಾವು ಸಾಕ್ಷಿಗ[4]ಳಬಳ[4]ರೆಂದೇ
ನೀವು ನೃಪತಿಯ ತೊಡೆಯನುಡಿದಿರಿ
ಡಾವರವೆ ಸಾಕ್ಷೈಸೆ ಕಾಲಿಕ್ಕಿದಿರಿ ಸಿರಿಮುಡಿಗೆ॥ ೨೪

ಎಂದು ನೇಗಿಲ ತುಡುಕಿಯೆಡಗೈ
ಯಿಂದ ನೆಗಹಿ ಮಹೋಗ್ರ ಮುಸಲವ
ನೊಂದು ಕಯ್ಯಲಿ ತಿರುಹಿ ಕೊಬ್ಬಿದ ಖತಿಯ ಭಾರದಲಿ।
ಮುಂದೆ ನಡೆತರೆ ಸಕಲಸೇನಾ
ವೃಂದ ನಡುಗಿತು ಬಹಳ ಭೀತಿಯ
ಬಂದಿಯಲಿ ಜರುಗಿದವು ಜವಳಿಯ ಜಗದ ಜೋಡಿಗಳು॥ ೨೫

ಬಿಲ್ಲ ಮಿಡಿದನು ಪಾರ್ಥ ಭಾರತ
ಮಲ್ಲ ಕೊಂಡನು ಗದೆಯ ನೃಪ ನಿಂ
ದಲ್ಲಿ ಬೆಱಗಾದನು ರಣೋತ್ಸವವಾಯ್ತು ಯಮಳರಿಗೆ।
ತಲ್ಲಣಿಸಿತುಳಿದರಸುಮಕ್ಕಳು
ಚಲ್ಲಿತಾ ಸುಭಟೌಘ ವಿಜಯಾದ
ಭುಲ್ಲವಣೆ ಪಲ್ಲಟಿಸಿತವರಿಗೆ ಖೇ[5]ಡತನ[5]ದೊಡನೆ॥ ೨೬

---

[1] ಪ್ಪಲ್ಲೆ (ಘ.ತ). [2] ಭಾಷೆ (ಘ.ತ). [3] ರಿಳೆಯೊಳ (ಘ.ತ). [4] ರಲ್ಪ (ಖ.ತ.ಪ), ಳಲ್ಲ (ಘ). [5] ದತಮು (ಟ.ದ).

ಹಲಧರನ ಖತಿ ಬಲುಹು ಕದನಕೆ
ಮಲೆತನಾದಡೆ ಹಾನಿ ತಪ್ಪದು
ಗೆಲವಿನಲಿ ಸೋಲದಲಿ ತಾನೌಚಿತ್ಯವೇನಿದಕೆ।
ಒಳಗೆ ಬಿದ್ದ ವಿಘಾತಿ ಮುರರಿಪು
[1]ತಿಳಿವನೋ[1] ತವಕಿಸುವನೋ ನಾ
ವಳಿದೆವಿನ್ನೇನೆನುತ ನಡುಗಿದನಂದು ಯಮಸೂನು॥ ೨೭

ಹಲಧರನ ಮುಸಕವನು ಪಾಂಡವ
ಬಲದ ದುಶ್ಚೇಷ್ಟೆಯನು ಭೀಮನ
ಫಲುಗುಣನ ಧರ್ಮಜರ ಯಮಳರ ಚಿತ್ತವಿಭ್ರಮವ।
ಬಲಿಮಥನನೀಕ್ಷಿಸುತ ರಜತಾ
ಚಲವ ತಱುಬುವ ನೀಲಗಿರಿಯವೊ
ಲಳುಕದಿದಿರಲಿ ನಿಂದು ಹಿಡಿದನು ಬಲನ ಬಲಗಯ್ಯ॥ ೨೮

ಚಿತ್ತವಿಸಿರೇ ಬಱಿಯ ರೋಷಕೆ
ತೆತ್ತಡೇನಹುದಂತರಂಗವ
ನುತ್ತಮರ ಪದ್ಧತಿಗಳಲಿ ಶಾಸ್ತ್ರಾರ್ಥನಿಶ್ಚಯವ।
ಬಿತ್ತರಿಸುವುದು ಕೌರವೇಂದ್ರನ
ಕಿತ್ತಡವ ನೀವಱಿಯಿರೇ ನಿಮ
ಗೆತ್ತಿದಾಗ್ರಹ ನಿಲಲಿ ತಿಳುಹುವೆನೆಂದನಸುರಾರಿ॥ ೨೯

ಏನ ತಿಳುಹುವೆ ನೀನು ಶಾಸ್ತ್ರದೊ
ಳೇನ ನಡೆದರು ನಿನ್ನವರು ಯಮ
ಸೂನು ನುಡಿಯನೆ ಸಮಯವನು ಶಾಸ್ತ್ರೌಘಸಂ[2]ಗತಿ[2]ಯ।
ಹೀನಗತಿ ಪಡಿತಳದ ಹೊಯ್ಲು
ತ್ತಾನಘಾಯದಲೊದಗಬೇಕೆಂ
ಬೀ ನಿಬಂಧನವಾರಲಳಿದುದು ಕೃಷ್ಣ ಹೇಳೆಂದ॥ ೩೦

ಅದಱಿನೀ ಕೌರವನ ತೊಡೆಗಳ
ಸದೆದನನ್ಯಾಯದಲಿ ನಿನ್ನವ
ನಿದಕೆ ಸೈರಿಸಬಹುದೆ ಹೇಳೈ ಧರ್ಮ[3]ನಿರ್ಣಯವ[3]।

[1] ಮುಳಿದನೋ (ಕ), ತಿಳಿದನೋ (ಟ.ದ). [2] ಹಿತೆ (ಘ.ತ). [3] ವಿಹ್ವ ಳಕೆ (ಕ), ವೀಪದಕೆ (ಘ.ಪ).

ಮದಮುಖನ ಭುಜಬಲವ ನೋಡು[1]ವ
ವಿ[1]ದು ವಿಕಾರವಲಾ ಎನುತ ಮುರು
ಚಿದನು ಬಲ ಬಲಗಯ್ಯನುರವಣಿಸಿದನು ಖಾತಿಯಲಿ॥ ೩೧

ಹರಿದು ಹಿಡಿದನು ಮತ್ತೆ ನೀಲಾಂ
ಬರನ ಸೆರಗನು ನಿಮ್ಮ ಕುರುಪತಿ
ಚರಿಸಿದನಲಾ ಧರ್ಮವಿಸ್ತರವನು ವಿ[2]ಭಾಡಿ[2]ಸದೆ।
ಕರಸಿ ಕಪಟದ್ಯೂತದಲಿ ನೃಪ
ವರನ ಸೋಲಿಸಿ ಪಟ್ಟದರಸಿಯ
ಕರಸಿ ಸುಲಿಸುವುದಾವ ಋಷಿಮತವೆಂದನಸುರಾರಿ॥ ೩೨

ಎಣಿಸಬಹುದೇ ನಿಮ್ಮ ನೃಪನವ
ಗುಣವನನ್ಯಾಯಪ್ರ[3]ಬಂಧಕೆ[3]
ಗಣನೆಯುಂಟೇ ಭೀಮಗಡ ಖಂಡಿಸಿದ ತೊಡೆಗಳನು।
ಕೆಣಕಿದನು ಮೈತ್ರೇಯನನು ನೃಪ
ನಣಕಿಸಲು ಶಪಿಸಿದನು ತೊಡೆಗಳ
ಹಣಿದವಾಡಲಿಯೆಂದನದು ತಪ್ಪುವುದೆ ಋಷಿವಚನ॥ ೩೩

ಆ ಪತಿವ್ರತೆ ಬಯ್ದಳೀ ಕುರು
ಭೂಪ ತೊಡೆಗಳ ತೋಱಿ ಜಱೆಯಲು
ದ್ರೌಪದಿಯ ನುಡಿ ತಪ್ಪುವುದೆ ಋಷಿವಚನದನುಗತಿಗೆ।
ಕೋಪ ಕುಡಿಯಿಡಲೀ ವೃಕೋದರ
ನಾಪಸಿತುಡಿದನು ಪ್ರತಿಜ್ಞಾ
ಸ್ಥಾಪನಕೆ ಬಳಿಕೇನ ಮಾಡುವುದೆಂದನಸುರಾರಿ॥ ೩೪

ಎಂದು ರಾಮನ ಮನವ ನಯನುಡಿ
ಯಿಂದ ತಿಳುಹಿದನೈಸಲೇ ಬಳಿ
[4]ಕಂ[4]ದು ದುಗುಡದಲವರು ನಡೆದರು ದ್ವಾರಕಾಪುರಿಗೆ।
ಬಂದ ಕಂಟಕ ಬಳಿಚಿತೇ ಸಾ
ಕೆಂದು ಹರಿ ಕುರುಪತಿಯ ಹೊರೆಗೈ
ತಂದು ಬೋಳೈಸಿದನು ಭೀಮಾರ್ಜುನ ಯುಧಿಷ್ಠಿರರ॥ ೩೫

---

[1] ವೆವಿ (ಖ), ವಡಿ (ಘ.ತ), ವೆನಿ (ಟ.ದ). [2] ಚಾರಿ (ಕ). [3] ಪಂಚಕೆ (ಖ.ಟ.ಪ). [4] ಕೆಂ (ಕ.ಘ.ಟ.ತ.ದ)

ಈಸುದಿನ ಪರಿಯಂತ ಧರ್ಮದ
ಮೀಸಲಳಿಯದೆ ಬಳಸಿ ಬಹಳಾ
ಯಾಸವನು ಸೈರಿಸಿದಿರಿಂದಿನ ಯುದ್ಧಕೇಳಿಯಲಿ।
ಘಾಸಿಯಾದುದು ಧರ್ಮಗತಿ ಬುಧ
ರೇಸು ಮನಗಾಣರು ವೃಥಾಭಿನಿ
ವೇಶವಾದುದು [1]ಮಕು[1]ಟಭಂಗದೊಳೆಂದ[2]ನಾ ಭೂಪ[2]॥ ೩೬

ಅರಸ ತಲೆಗುತ್ತಿದನು ದೃಗುಜಲ
ವುರವಣಿಸಿ ಮೌನದಲಿ ಫಲುಗುಣ
ನಿರೆ ಮುರಾರಿ ಸುಯೋಧನನ ಸರ್ವಾವಗುಣಗಣವ।
ಪರಿಪರಿಯಲೆಚ್ಚರಿಸಿ ದುಗುಡವ
ಪರಿಹರಿಸಿ ಸಂತೈಸಿದಡೆ ಮುರ
ಹರನ ಬೈದನು ನಿನ್ನ ಮಗ ನಾನಾವಿಡಂಬದಲಿ॥ ೩೭

ಆರ ಬಸುರಲಿ ಬಂದು ಮೊಲೆಯುಂ
ಡಾರ ಮಡಲಲಿ ಬೆಳೆದು ಬಳಿಕಿನೊ
ಳಾರ ಹೆಂಡಿರ ಕೊಂಡು ಕಟು ತುಱುಗಾದು ಕಳವಿನಲಿ।
ವೀರ ದೈತ್ಯನ ಸದೆಬಡಿದು ಕುರು
ವೀರವಂಶದ ರಾಯರೆಮ್ಮೊಳು
ವೈರಬಂಧವ ಬಿತ್ತಿ ಕೊಂದವ ಕೃಷ್ಣ ನೀನೆಂದ॥ ೩೮

ಬಣಗುಗಳು ಭೀಮಾರ್ಜುನರು ಕಾ
ರಣಿಕ [3]ನೀ ನಡುವಾಯಿ[3] ಧರ್ಮದ
ಕಣಿ ಯುಧಿಷ್ಠಿರನೆತ್ತ ಬಲ್ಲನು ನಿನ್ನ ಮಾಯೆಗಳ।
ಸೆಣಸನಿಕ್ಕಿದೆ ನಮ್ಮೊಳಗೆ ಧಾ
ರುಣಿಯ ಭಾರವ ಬಿಡಿಸಲೋಸುಗ
ರಣವ ಹೊತ್ತಿ[4]ಸಿ[4] ನಮ್ಮ ಬೇಂಟೆಯನಾಡಿಸಿದೆಯೆಂದ॥ ೩೯

ಪಾ[5]ಪ[5] ನಿನಗೀ ಗೋತ್ರವಧೆಯ ವಿ
ಳಾಪ ನಿ[6]ನ್ನನು ತಾಗಲೀ[6] ಸ
ರ್ವಾಪರಾಧವು ನಿನ್ನದೀ ಕೌರವರ ಪಾಂಡವರ।

---

[1] ಕೂ (ಫ.ತ). [2] ನಸುರಾರಿ (ಕ), ನವನೀಶ (ಟ.ದ). [3] ನಿನ್ನದು ಪಾಯ (ಖ.ಫ.ತ), ನೀನಡುವಾಯ್ದೆ (ಟ.ದ). [4] ಕಿ (ಫ.ತ). [5] ಪಿ (ಫ.ತ). [6] ನ್ನನುತಾಗುವುದು (ಕ), ನ್ನೆದೆದಾಗಲೀ (ಖ).

ಕೋಪವನು ಕೊನರಿಸುವ ನೃಪರನು
ತಾಪವನು [1]ತೂಳುವ[1] ಕುಬುದ್ಧಿ
ವ್ಯಾಪಕನು ನೀ ವೈರಿಯಲ್ಲದೆ ಭೀಮನಲ್ಲೆಂದ॥ ೪೦

ರಣಮುಖದೊಳೀ ಕ್ಷತ್ರಧರ್ಮದ
ಕುಣಿಕೆ ತಪ್ಪದೆ ವೇದಶಾಸ್ತ್ರದ
ಭಣಿತೆ ನೋಯದೆ ವೀರವೃತ್ತಿಯ ಪದದ ಪಾಡಱಿದು।
ಸೆಣಸು [2]ಸೋಂಕಿದ[2] ಛಲದ [3]ವಾಸಿ[3]ಯೊ
ಳಣುವ ಹಿಂಗದೆ ಜೀವದಾಸೆಗೆ
ಮಣಿಯದಳಿದುದನೆಲ್ಲ ಬಲ್ಲರು ಕೃಷ್ಣ ಕೇಳೆಂದ॥ ೪೧

ಮತ್ತೆ ಹೂವಿನ ಮಳೆಗಳಾತನ
ನೆತ್ತಿಯಲಿ ಸುರಿದವು ಮುರಾಂತಕ
ನತ್ತ ತಿರುಗಿದನವನಿಪತಿ ಕರತಳವ ತಳುಕಿಕ್ಕಿ।
ಮುತ್ತಿದರು ಮಾಗಧರು ವಂದಿಗ
ಳೆತ್ತಣದು ನಾನಱಿಯೆನರಸ ವಿ
ಯತ್ತಳವನಳ್ಳಿಱಿದುದಾ ಸ್ತುತಿಪಾಠಕರ ರಭಸ॥ ೪೨

ಗರುವ ಸುಭಟರು ಘಾಸಿಯಾದಿರಿ
ತುರಗ ಗಜ ಬಳಲಿದವು ಸೂರ್ಯನ
ತುರಗ ಬಿಡು[4]ತ[4]ದೆ ಪಶ್ಚಿಮಾದ್ರಿಯ ತಡಿಯ ತಪ್ಪಲಲಿ।
ತ್ವರಿತದಲಿ ಪಾಂಚಾಲ ಸೃಂಜಯ
ಧರಣಿಪರು ನೀವ್ ಹೋಗಿ ನಿದ್ರೆಯೊ
ಳಿರುಳ ನೂಕುವುದೆಂದು ನುಡಿದನು ದೈತ್ಯರಿಪು ನಗುತ॥ ೪೩

ನಡೆಯಿ ಪಂಚದ್ರೌಪದೇಯರ
ಗಡಣ ಧೃಷ್ಟದ್ಯುಮ್ನ ನಿಳಯಕೆ
ನಡೆ ಯುಧಾಮನ್ಯೂತ್ತಮೌಂಜಸ ಕಲಿ ಶಿಖಂಡಿಗಳು।
ತಡೆಯಿದಿರಿ ಭಟರೇಳಿ ವಾದ್ಯದ
ಗಡಬಡಿಗರೀ ಸಕಲಜನ ನೀವ್
ಕಡು ಬಳಲಿದಿರಿ ಹೋಗಿ ಪಾಳೆಯಕೆಂದು ನೃಪ ನುಡಿದ॥ ೪೪

---

[1] ಹೆಚ್ಚಿಪ (ಕ), ತಾಳುವ (ಘ.ತ). [2] ಸೊಕ್ಕಿದ (ಕ), ಸುಕ್ಕಿದ (ಖ.ಘ).
[3] ಬಾಳಿ (ಕ), ಬಾಸಿ (ಖ), ಬಾಳೆ (ಘ), ಬಾಷೆ (ಟ). [4] ತಿ ಖ.ಟ.ದ).

ಬೀಳುಕೊಂಡುದು ಸಕಲಬಲ ಪಾಂ
ಚಾಲ ಪಂಚದ್ರೌಪದೇಯರು
ಪಾಳೆಯವ ಹೊಕ್ಕರು ಯುಧಿಷ್ಠಿರನೃಪನ ನೇಮದಲಿ।
ಏಳಿ ನಾವೀ ಕೌರವೇಂದ್ರನ
ಪಾಳೆಯವ ನೋಡುವೆವೆನುತ ವನ
ಮಾಲಿ ರಥವೇಱಿದನಿವರು ತಂತಮ್ಮ ರಥವೇಱೆ॥ ೪೫

ನರ ಯುಧಿಷ್ಠಿರ ಭೀಮ ಸಹದೇ
ವರು ನಕುಲ ಸಾತ್ಯಕಿಸಹಿತ ಮುರ
ಹರನು ಹೊಕ್ಕನು ಕೌರವೇಂದ್ರನ ಶೂನ್ಯ ಶಿಬಿರವನು।
ಅರಸ ಕರ್ಣ ದ್ರೋಣ ಮಾದ್ರೇ
ಶ್ವರನ ಭಗದತ್ತನ ನದೀಜಾ
ದ್ಯ[1]ರ ನಿವಾಸಂಗಳನು[1] ಕಂ[2]ಡಳಲಿದನು ಯಮಸೂನು[2]॥ ೪೬

ಸೂತನಿಳಿದನು ಮುನ್ನ ರಥವನು
ಭೂತಳಾಧಿಪನಿಳಿದನಶ್ವ
ವ್ರಾತವನು ಕಡಿಯಣದ ನೇಣಲಿ ತೆಗೆದು ಬಂಧಿಸಿದ।
ವಾತಜನ ಸಾತ್ಯಕಿಯ ಯಮಳರ
ಸೂತರಿಳಿದರು ಮುನ್ನ ತುರಗ[3]ವ
ನಾತಗಳು[3] ಸಂತೈಸಿದರು ಸಂಗರಪರಿಶ್ರಮವ। ೪೭

ಇಳಿ ರಥವನೆಲೆ ಪಾರ್ಥ ಬಳಿಕಾ
ನಿಳಿವೆನೆಂದನು ಶೌರಿ ನೀವ್ ಮು
ನ್ನಿಳಿವುದೆಂದನು ಪಾರ್ಥನಾಯ್ತು ವಿವಾದವಿಬ್ಬರಿಗೆ।
ಎಲೆ ಮರುಳೆ ನಾ ಮುನ್ನಿಳಿಯೆ ನೀ
ನುಳಿವೆಲಾ ಸಾಕಿನ್ನು ಗರ್ವದ
ಗಳಹತನವನು ಬಳಿಕ ತೋಱುವೆ ರಥವನಿಳಿಯೆಂದ॥ ೪೮

ಬಳಿಕ ಫಲುಗುಣ ರಥದ ಮೇಲಿಂ
ದಿಳೆಗೆ ಹಾಯ್ದನು ಕೃಷ್ಣ ನೀನಿ
ನ್ನಿಳಿಯೆನಲು ಚಮ್ಮಟಿಗೆ ವಾಘೆಯ ನೇಣ ರಥದೊಳಗೆ।

---

[1] ರುಗಳಿಹನಿಳಯವನು (ಕ), ರನಿವಾಸನಿವಾಸಾಳಿಗಳನು (ಘ), ರನಿವಾಸ ನಿವಾಸಗಳನು (ತ). [2] ಡಿಳಿದನಾನೃಪತಿ (ಘ.ತ). [3] ವ್ರಾತವನು (ಕ).

ಇಳುಹಿ ನಗುತ ಮುಕುಂದ ರಥದಿಂ
ದಿಳಿಯೆ ಛಟಛಟಿಲೆಂದು ಕಿಡಿಯು
ಚ್ಚಳಿಸಲುರಿದ.ದು ತೇರು ಕೇಸುರಿ ನಭವನಪ್ಪಳಿಸೆ॥ ೪೯

ಧ್ವಜದ ಹಲಗೆಯನೊಡೆದು ಕಾಯ್ದನು
ನಿಜನಿವಾಸಕೆ ಹನುಮ ಧೂಮ
ಧ್ವಜನ[1]ಮಯ[1]ವಾದುದು ರಥಾಶ್ವರಥಾಂಗರಾಜಿಯಲಿ।
ವಿಜಯ ಭೀಮಾದಿಗಳು ಕಂಡ
ಕ್ಕಜದೊಳಾಕಸ್ಮಿಕದ ಕಿಚ್ಚಿನ
ಗಜಬಜವಿದೇನೆನುತ ನೆಱೆ ಬೆಚ್ಚಿದರು ಭೀತಿಯಲಿ॥ ೫೦

ಹರಿಯಿದೇನಾಕಸ್ಮಿಕದ ದ
ಳ್ಳುರಿಯೊಳದ್ದುದು ತೇರು ನಮ[2]ಗೀ
ಯು[2]ರಿಯು ಭಯ [3]ಭಾರಿಸಿ[3]ತಿದೇನು ನಿಮಿತ್ತವಿದಕೆನಲು।
ಉರಿವುದಂದೇ ತೇರು ಕರ್ಣನ
ಗುರುನದೀನಂದನನ ದೈವಿಕ
ಶರಹತಿಯೊಳೆಮ್ಮಿಂದ ನಿಂದುದು ಪಾರ್ಥ ಕೇಳೆಂದ॥ ೫೧

ನಾವಿಳಿದ ಬಳಿಕೀ ರಥದೊಳಿರ
ಲಾವ ಹದನೋ ನಿನಗೆ ಕಂಡೈ
ದೈವಿಕಾಸ್ತ್ರದ ಮಹಿಮೆಗಳನೆನೆ ಪಾರ್ಥ ತಲೆವಾಗಿ।
ನೀ[4]ವು[4] ಬಲ್ಲಿರಿ ದೇವ ನೀ ಮಾ
ಯಾವಿ ಮಾಯಾಪಾಶಬದ್ಧರು
ನಾವು ಬಲ್ಲೆವೆ ನಿಮ್ಮನೆಂದೆಱಗಿದನು ಚರಣದಲಿ॥ ೫೨

ಧರಣಿಪತಿ ಕೇಳೀಚೆಯಲಿ ಕೃಪ
ಗುರುತನುಜ ಕೃತವರ್ಮಕರು ನ
ಮ್ಮರಸನೇನಾದನೊ ವಿರೋಧಿಯ ದಳದ ವೇಢೆಯಲಿ।
ತರಣಿ ತಿಮಿರಕೆ ತೆಱಹಗೊಟ್ಟನು
ಭರತಖಂಡ[5]ವನಿ[5]ನ್ನು ರಾಯನ
ಪರಿಗತಿಯನಾರೈವೆವೆನುತೇಱಿದರು ನಿಜರಥವ॥ ೫೩

---

[1] ಸಮ (ಪು.ತ). [2] ಗಿಂದು (ಖ.ಟ), ಗಿನ್ನು (ಪು.ತ). [3] ಭಂಗಿಸಿ (ಖ), ಬಂಧಿಸಿ (ತ). [4] ವೆ (ಖ.ತ). [5] ನಕಿ (ಖ).

ಭರದಲಿವರು ನೃಪಾಲನಡಗಿದ
ಸರಸಿಗೈತಂದಿಳಿದು ತಡಿಯಲಿ
ತುರಂಗವನು ಬಿಡಿಸಿದರು ಸಾರಥಿ ಹೊಗಿಸಿದನು ಕೊಳನ।
ತ್ವರಿತದಲಿ ಶೌಚಾಚಮನವಿ
ಸ್ತರಣ ಸಂಧ್ಯಾವಂದನಾದಿಯು
ವಿರಚಿಸಿದರಱಸಿದರು ಕೊಳನಲಿ ಕೌರವೇಶ್ವರನ॥ ೫೪

ಬಳಸಿ ಜಂಬುಕ ಘೂಕ ಕಾಕಾ
ವಳಿಗಳೆದ್ದವು ಮೇಲುವಾಯ್ದು
ವ್ವಳಿಸಲಮ್ಮದೆ ಗಾಢತರ ಗರ್ಜನೆಗೆ ಕುರುಪತಿಯು।
ಕಳಕಳವಿದೆತ್ತಣದೆನುತ ಕಳ
ವಳಿಸಿ ಬಂದು ಮಹಾರಥರು ನೃಪ
ತಿಲಕನಿರವನು ಕಂಡು ಥೊಪ್ಪನೆ ಕೆಡೆದರವನಿಯಲಿ॥ ೫೫

ಉಡಿದ ತೊಡೆಗಳ ಮಗ್ಗುಲಲಿ ಹೊನ
ಲಿಡುವ ರಕುತದ ಭೀಮಸೇನನ
ಮಡದ ಹೊಯ್ಲಲಿ ಕೆಲಕೆ ಸೂಸಿದ ಮಕುಟಮಣಿಮಯದ।
[1]ಕೆಡೆದು[1] ಮೈವೇಧನೆಗೆ ನರಳುವ
ನಿಡುಸರದ [2]ಖಗ[2] ಜಂಬುಕೌಘವ
ನಿಡುವ ಕೈಗಲ್ಲುಗಳ ನೃಪತಿಯ ಕಂಡರಿವರಂದು॥ ೫೬

ಒಱಲಿದರು ಧರೆ ಬಿರಿಯೆ ಹುಡಿಯಲಿ
ಹೊರಳಿದರು ಬಾಯ್ಗಳನು ಹೊಯ್' ಹೊ
ಯ್ದುಬ್ಬಿ ಕೆಡೆದರು ಕುಂದಿದರು ಕಾತರಿಸಿ ಕಳವಳಿಸಿ।
ಮಱುಗಿದರು ಮನಗುಂದಿದರು ಮೈ
ಮಱೆದರದ್ದರು ಶೋಕಜಲಧಿಯೊ
[3]ಳಱಲು[3]ಗೊಂಡರು ತಳ್ಳಬಾರಿದರವರು ನಿಮಿಷದಲಿ॥ ೫೭

ಹದುಳಿಸಿರೆ ಸಾಕೇಳಿ ಸಾಕಿ
ನ್ನಿದಱಲಿನ್ನೇನಹುದು ದೈವದ
ಕದಡು ಮನಗಾಣಿಸಿತು ನಮಗೀ ಕಂಟಕವ್ಯಥೆಯು।

---

1 ಕಡಿದ (ಕ). 2 ಖಡು (ಕ). 3 ಳುರುಕು (ಖ).

ಉದಯದಲಿ ನಾವೀ ಶರೀರವ
ನೊದೆದು ಹಾಯ್ವೆವು ನೀವು ನಿಜವಾ
ಗರ್ದಲಿ ಬಿಜಯಂಗೈವುದೆಂದನು ನಗುತ ಕುರುರಾಯ॥ ೫೮

ಶೋಕವಡಗಿದುದವರಿಗಂತ
ರ್ವ್ಯಾಕುಳತೆ ಬೀಳ್ಕೊಂಡುದಹುದಿ
ನ್ನೇಕೆ ಸಂ[1]ವೇ[1]ಶಾ [2]ನುಭೂತಾನುಭವದುರ್ವ್ಯಸನ[2]।
ಸಾಕದಂತಿರಲಿನ್ನು ಬಿಡು ನೀ
ಸಾಕಿತಕೆ ಫಲವೆನಿಸಿ ರಜನಿಯೊ
ಳಾ ಕುಠಾರರ ತಲೆಗಳನು ತಹೆನೆಂದನಾ ದ್ರೌಣಿ॥ ೫೯

ಅಕಟ ಮರುಳೇ ಗುರುಸುತನ ಮತಿ
ವಿಕಳತನವನು ಕೃಪನು ಕೃತವ
ರ್ಮಕರು ಕಂಡಿರೆ ಪಾಂಡವರ ತಲೆ ತನಗೆ ಗೋಚರವೆ।
ಬಕನ ಧರ್ಮ [3]ಸ್ಥಿ[3]ತಿಯವೊಲು ದೇ
ವಕಿಯ ಮಗ ಕಾದಿಹನಲೇ ಕೌ
ಳಿಕದ ಸಿದ್ಧನ ಕೃತಿಯನಾರಿಗೆ ಮಾಡಬಹುದೆಂದ॥ ೬೦

ಹರಿಹರಬ್ರಹ್ಮಾದಿದೇವರು
ವೆರಸಿ ಕಾಯಲಿ ರಾತ್ರಿಯಲಿ ರಿಪು
ಶಿರವ ತಹೆನಿದಕೇಕೆ ಸಂಶಯವೆನ್ನ ಕಳುಹುವುದು।
ಇರಲಿ ಕೃಪಕೃತವರ್ಮಕರು ಹ
ತ್ತಿರೆ ರಣಾಧ್ಯಕ್ಷದಲಿ ಭಾಷಾ
ಚರಣ ಪೈಸರಿಸಿದಡೆ ದ್ರೋಣನ ತನಯನಲ್ಲೆಂದ॥ ೬೧

ಆಗಲಾ ಪಾಂಡವರ ವಧೆ ನಿನ
ಗಾಗಲರಿಯದು ನಿನ್ನ ಭುಜಬಲ
ವಾಗುರಿಯ ವೇಢೆಯಲಿ ಬೀಳದು ಕೃಷ್ಣ ಬುದ್ಧಿಮೃಗ।
ಈಗಳೀ ನಿರ್ಬಂಧವಚನವಿ
ರಾಗಮೆವಗೇಕಾರಿಗಾವುದು
ಭಾಗಧೇಯವದಾಗಲೆಂದನು ಕೌರವರರಾಯ॥ ೬೨

---

[1] ದೇ (ಕ). [2] ನುಭೂತದವರಧುರವ್ಯಸನ (ಖ), ನುಭಾವದುರ್ವ್ಯಸನ ಘ.ತ), ನುಭೂತಾವೇಷ ದುರ್ವ್ಯಸನ (ಟ.ದ). [3] ಶ್ರು (ಖ.ಘ.ತ).

ವರ ಚಮೂಪತಿ ನೀನು ಬಳಿಕಿ
ಬ್ಬರು ಚಮೂವಿಸ್ತಾರವೆನೆ ವಿ
ಸ್ತರಿಸಿ ರಚಿಸುವುದೆಂದು ರಥಿಕತ್ರಯಕೆ ನೇಮಿಸಿದ।
ಗುರುಜ ಕೃಪ ಕೃತವರ್ಮರೀ ಮೂ
ವರು ನರೇಂದ್ರನ ಬೀಳುಕೊಂಡರು
ಕರೆದು ಸೂತರ ಸನ್ನೆಯಲಿ ಬಂದೇರಿದರು ರಥವ॥ ೬೩

ಇವರು ಬಂದರು ದಕ್ಷಿಣದ ದೆಸೆ
ಗವರ ಪಾಳೆಯಕಾಗಿ ಸುತ್ತಲು
ಸವಡಿಗತ್ತಲೆಯಾಯ್ತು ಘನರೋಷಾಂಧಕಾರದಲಿ।
ಇವರು ಮನದಲಿ [1][ಕುಡಿ][1]ದರಹಿತಾ
ರ್ಣವವ[2]ರಿ[2]ವರಿಗೆ ಗೋಚರವೆ ಪಾಂ
ಡವರು ಗದುಗಿನ ವೀರನಾರಾಯಣನ ಕರುಣದಲಿ॥ ೬೪

ಎಂಟನೆಯ ಸಂಧಿ ಮುಗಿದುದು.

---

[1] ಕುದಿ (ಕ), ಕಡಿ (ಖ), ಕಾದಿ (ಘ). [2] ದಿ (ಕ ಖ.ಘ.ತ.)

# ಒಂಬತ್ತನೆಯ ಸಂಧಿ

---

ಸೂಚನೆ॥ ರಾಯಪರಬಲ ಮ[1]ದ[1]ನಹರ ರಿಪು
ರಾಯಕುವರರು ಸಹಿತ ಪಾಂಡವ
ರಾಯಕಟಕವ ಕೊಂದನಶ್ವತ್ಥಾಮ ರಜನಿಯಲಿ ॥

ಕೇಳು ಧೃತರಾಷ್ಟ್ರಾವನಿಪ ನಿ
ನ್ನಾಳ ಚಿತ್ತದ ಚಟುಳ ಪಣದ [2]ಚ
ಡಾಳತನವನು ಸಂಗರದೊಳುದ್ದಾಮ ಸತ್ವದಲಿ[2]।
ಪಾಳೆಯವ ಸಾರಿದರು [3]ವಿಟಪಲ
ತಾಳಿವಿಶ್ರಮ[3]ತಿಮಿರಗಹನವಿ
ಶಾಲವಟಕುಜವಿರಲು ಕಂಡರು ನಿಲಿಸಿದರು ರಥವ॥ ೧

ನಿಲುವೆವಿಲ್ಲಿ ವಿರೋಧಿಸಂತತಿ
ಯುಲುಹನಾಲಿಸಬಹುದು ಕೋಟಾ
ವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ।
ಇಳಿದರಿಬ್ಬರು ಸೂತರಿಗೆ ಕೈ
ಕೊಳಿಸಿದರು ಕುದುರೆಗಳನಾ ಕಲು
ನೆಲದೊಳೊಱಗಿದರವರು ಸಮರಶ್ರಮದ ಭಾರದಲಿ॥ ೨

ಒಳಗೆ ತೊಳಲಿಕೆಯುಕ್ಕಡಕೆ ಕಳ
ವಳಿಸಿ ಹಾಯಿದರೊಮ್ಮೆ ಮತ್ತಂ
ತೆಲೆಮಿಡುಕದಾಲಿಸಿ ನಿಧಾನಿಸಿ ಸಾರಿದರು ಮರನ।
ಬಳಲಿಕೆಯ ಬೇಸಱಿನೊಳಾ ಕೃಪ
ಮಲಗಿದನು ಕೃತವರ್ಮನೊಲೆದಾ
ಗುಳಿಸಿ ತೂಕಡಿಸಿದನು ತೆಗೆದುದು ನಿದ್ರೆ ತನುಮನವ॥ ೩

---

[1] ಥ(ಕ), ಧ (ಖ). [2] ಚಡಾಳವನು ಕಳನೊಳಗೆ ಬಂದರು ಭಾವಕತ್ವದಲಿ (ಖ), ಛಡಾಳವನು ಸಂಗರಮಹಾರಂಭಾವತತ್ವದಲಿ (ಘ.ತ), ಛಡಾಳವನು ಸಂಗರ ದುರಂಧರ ಬಾಹುಸತ್ವದಲಿ (ಟ). [3] ವಿಟಪದವಾಳಿವಿಶ್ರಮ (ಖ), ನಿದ್ರಾಭೀಳ ವಿಶ್ರಮ (ಘ), ವಿಟಪಿಲತಾಳಿವಿಶ್ರುತ (ಟ.ದ), ನಿದ್ರಾಭೀಳ ವಿಶ್ರುತ (ತ).

ಕುಸಿದು ಜೊಮ್ಮನ ಜಾಡ್ಯದಲಿ ಝೊಂ
ಪಿಸಿದರಿಬ್ಬರು ರಾಯಗರುಡಿಯ
[1]ಜಸದ ಜಹಿಯಲಿ[1] ಸ್ವಾಮಿಕಾರ್ಯದ ಹೊತ್ತ ಹೋಱಿಗೆಯಲಿ।
ಉಸುರು ಮಿಡುಕದೆ ನಿದ್ರೆನೆನಹಿನ
ಮುಸುಕನುಗಿಯದೆ[2]ಯಿಷ್ಟಸಿದ್ಧಿಯು[2]
ವಿಷಮ ಸಮಸಂಧಿಗಳ ಸರಿವಿನೊಳಿರ್ದನಾ ದ್ರೌಣಿ॥ ೪

ಭಾಗ ಬೀತುದು ರಜನಿಯಲಿ ಸರಿ
ಭಾಗವಿದ್ದುದು ಮೇಲೆ ತತ್‌ಕ್ಷಣ
ಗೂಗೆ ಬಂದುದದೊಂದು ವಟಕುಜದಗ್ರಭಾಗದಲಿ।
ಕಾಗೆಗಳ ಗೂಡುಗಳ ಹೊಯ್ದು ವಿ
ಭಾಗಿಸಿತು ತುಂಡದಲಿ ಬಿದ್ದವು
ಕಾಗೆ ಸುಭಟನ ಸಮ್ಮುಖದಲಿ ಸಹಸ್ರಸಂಖ್ಯೆಯಲಿ॥ ೫

ಇದು ಮದೀಯ ಮನೋರಥದ ಸಂ
ಹೃದಯದೊಲು ಸಂಕಲ್ಪಕಾರ್ಯಾ
ಭ್ಯುದಯ ಸೂಚಕವಾಯ್ತು ನಿದ್ರಾಮುದ್ರಿತೇಕ್ಷಣರ।
ಪದವ ಹಿಡಿದಲ್ಲಾಡಿದಡೆ ಮೈ
ದೆಱುತೇನೇನೆನುತ ನಿದ್ರಾ
ಮದವಿಘೂರ್ಣನವಡಗಿ ಕುಳ್ಳಿರ್ದರು ಮಹಾರಥರು॥ ೬

ಏನು ಗುರುಸುತ ಕಾರ್ಯದನುಸಂ
ಧಾನವೇನೆನೆ ವಾಯಸಂಗಳ
ನಾ ನಿಶಾಟನನಿಱುವುತದೆ ಗೂಡುಗಳನಬ್ಬರಿಸಿ।
ಈ ನಿದರುಶನದಿಂದ ಪಾಂಡವ
ಸೇನೆಯನು ಕಗ್ಗೊಲೆಯೊಳಗೆ ಕೊಲ
ಲೇನು ಹೊಲ್ಲೆಹ ಮಾವ ಎಂದನು ಗುರುಸುತನು ಕೃಪಗೆ॥ ೭

ಲೇಸಲೈ ಕೃತವರ್ಮ ಬಳಿಕೀ
ನಾಸುರದ ಕಗ್ಗೊಲೆಗೆ [3]ರಾಜಾ
ದೇಶದಲಿ[3] ನಾವ್ ಬಂದೆವೀ ಪಾಂಡವರ ಪಾಳೆಯಕೆ।

---

[1] ಜಸದ ರಹಿಯಲಿ (ಖ), ಅಸಮಜಯದಲಿ (ಘ). [2] ನಟ್ಟ ದೃಷ್ಟಿಯ (ಕ), ಸಿದ್ಧಿಸಿದ್ಧಿಯ (ಘ.ತ). [3] ರಾಗದ್ವೇಷದಲಿ (ಖ.ಘ.ಟ.ತ).

ಘಾಸಿಯಾಗರು ಪಾಂಡುಸುತರಿಗೆ
ವಾಸುದೇವನ ಕಾಹು ಘನ ಕಾ
ಳಾಸ ತಪ್ಪಿದ ಬಳಿಕ ನಮಗಪಕೀರ್ತಿ ಬಹುದೆಂದ॥ ೮

ಕ್ರತುಹರನ ಸಮಜೋಳಿ ಗಂಗಾ
ಸುತನ ಜಯಿಸಿದರವರ ತೂಕದ
[1]ವಿತತ[1]ಬಲರ್ಕೈ ಭಾವನವರೊಗ್ಗಿದರು ದಿವಿಜರಲಿ।
ಅತಿರಥರೊಳಗ್ಗಳಿಯ ರಾಧಾ
ಸುತ ಸುಯೋಧನ ಮಾದ್ರಪತಿಯೀ
ವ್ಯತಿಕರದೊಳೇನಾದರಿದು ಮುರಹರನ ಕೃತಿಯೆಂದ॥ ೯

ಇರಿಸನಿಲ್ಲಿ ಮುರಾರಿ ಕೌಂತೇ
ಯರನಿದೊಂದು ನಿಧಾನ ಮೇಣಿ
ಲ್ಲಿರಿಸಿದಡೆ ಕೊಲಲೀಯನಡ್ಡೈಸುವನು ಚಕ್ರದಲಿ।
ಇರುಳು ಹಗಲಡವಿಯಲಿ ಮನೆಯಲಿ
ಶರಧಿಯಲಿ ಪರ್ವತದಲಗ್ನಿಯ
ಲಿರಲಿ ತನ್ನವರಲ್ಲಿ ಹರಿಗವಧಾನ ಬಲುಹೆಂದ॥ ೧೦

ಮಱಹಿನಲಿ ಮುಡುಹುವುದು ಧರ್ಮದ
ಹೊಱಗೆಯಲ್ಲದು ನಿದ್ರೆಗೈದರ
ನಿಱಿವುದೇನಿದು [2]ಪಂಥವೇ[2] ಪೌರಾಣಮಾರ್ಗದಲಿ।
ಅಱಿಯದಾರಂಭಿಸಿದೆವಿದಱಲಿ
ಪರಿಸಮಾಪ್ತಿಯು ಕಡೆವಾದಡೆ
ನೆಱೆ ಕೃತಾರ್ಥರು ವಿಘ್ನಶತವಡ್ಡೈಸದಿರವೆಂದ॥ ೧೧

ತಪ್ಪದಾಚಾರಿಯನ ನುಡಿ ಮೇ
ಲಪ್ಪುದನು ದೈವಾಭಿಯೋಗದೊ
ಳೊಪ್ಪವಿಡುವುದು ರಜನಿಯಲಿ ಕ್ಷತ್ರೇಟಿ ಕದನದಲಿ।
ಒಪ್ಪದಿದು ಸೌಭಟವಿಧಾನಕೆ
ನೊಪ್ಪಿತಹದಿದಱಿಂದ ರಿಪುಗಳ
ತಪ್ಪಿಸುವನಸುರಾರಿಯೆಂದನು ನಗುತ ಕೃತವರ್ಮ॥ ೧೨

1 ಲತುಳ (ಖ.ಘ ತ). 2 ಧರ್ಮವೇ (ಕ).

ಆದಡಿರಿ ನೀವಿಬ್ಬರಿಲ್ಲಿ ವಿ
ವಾದ ನಿಮ್ಮೊಡನೇಕೆ ಜನಪರಿ
ವಾದ ಭಯವೆಮಗಿಲ್ಲ ಸಾರಥಿ ರಥವ ತಾ ಯೆನುತ।
ಕೈದುಗಳ ಸಂವರಿಸಿ ರಥದಲಿ
ಹಾಯ್ದು ಹೊಱವಡೆ ಭೋಜಕೃಪರನು
ವಾದಡೆಮಗೇನೆನುತ ಬಂದರು ಪಾಳೆಯದ ಹೊರಗೆ॥ ೧೩

ಮುಱಿದು ಕೋಟೆಯನೊಂದು ಕಡೆಯಲಿ
ತೆಱಹುಮಾಡಿ ಮಹಾರಥರು ಜನ
ವೞಿಯುದವೊಲೊಳಹೊಕ್ಕು ಹೆಬ್ಬಾಗಿಲಲಿ ರಥವಿಳಿದು।
[1]ತಱವಳ[1]ರ ತೊಳಲಿಕೆಯ ಮೇಲೆ
ಚ್ಚಱಿಕೆ ಮಸುಳಿಸೆ ಮಧ್ಯರಾತ್ರಿಯೊ
ಳೞಿತದಂಘವಣೆಯಲಿ ಪರುಠವಿಸಿದನು ಗುರುಸೂನು॥ ೧೪

ಎರಡು ಬಾಗಿಲ ಪಾಳೆಯಕೆ ಕೃಪ
ನಿರಲಿ ಮೂಡಲು ಪಶ್ಚಿಮಾಂಗದೊ
ಳಿರಲಿ ಕೃತವರ್ಮಕನು ಬಾಗಿಲೊಳಾಂತ ರಿಪುಜನವ।
ಕರಿ ತುರಗ ರಥ ಪತ್ತಿಗಳ ಸಂ
ಹರಿಸುವುದು ನೀವಿಲ್ಲಿ ಮಧ್ಯದೊ
ಳರಸು ವೊತ್ತಕೆ ಮಿತ್ತು ತಾನಹೆನೆಂದು ಕೈಕೊಂಡ॥ ೧೫

ಎರಡು ಬಾಗಿಲೊಳಿವರನಿಬ್ಬರ
ನಿರಿಸಿ ಚಾಪವ ಹಿಡಿದು ಬಾಣವ
ತಿರುಹುತೊಬ್ಬನೆ ರಥವ ಬಿಟ್ಟನು ರಾಜಬೀದಿಯಲಿ।
ಅರಸ ಕೇಳದುಭುತವನಾ ನಡು
ವಿರುಳು ನೃಪವೀಥಿಯಲಿ ನಿಂದುದು
ಧರೆಗೆ ಗಗನಕೆ ಕೀಲನಿಕ್ಕಿದವೊಲು ಮಹಾಭೂತ॥ ೧೬

ನಿಟಿಲನಯನದ ಜಡಿವ ಜೂಟದ
ಜಟೆಯ ಫೂತ್ಕೃತಿಯುರಿಯ ನಾಸಾ
ಪುಟದ ವೈಕಕ್ಷಕದ ವಿಷಧರಪತಿಯ ವಾಸುಗಿಯ।

---

[1] ತಳವರ (ಖ.ಚ.ದ).

ಚಟುಳ ಚಪಳಪ್ರಭೆಯು ಘನಸಂ
ಘ[1]ಟಿತ[1]ವೆನೆ ಗರ್ಗರದ [2]ಘೋರ
ಸ್ಫುಟರವದ[2] ರೌದ್ರಾಭಿರ[3]ತಿ[3]ಯಲಿ ರಂಜಿಸಿತು ಭೂತ॥ ೧೭

ಬೆಚ್ಚಿದನೆ ಭಾರಣಿಯ ಭೂತವ
ನೆಚ್ಚು ಬೊಬ್ಬಿಱಿದಾರಿದನು ಮಗು
ಳೆಚ್ಚನೈದಾಱೇಳುಸಾಱೈನೂಱು ಸಾವಿರವ।
ಎಚ್ಚು ಹಾಯ್ದಂಬುಗಳು ಭೂತದ
ಬಿಚ್ಚುಗಂಗಳ ಕೊಂಡದುರಿಯಲಿ
[4]ಬಚ್ಚಿಸಿದ ಗಱಿ[4] ಸೀದು ಸೀಕರಿಯೋಗಿ ನಿಮಿಷದಲಿ॥ ೧೮

ಉಗಿದು ಮಂತ್ರಾಸ್ತ್ರವನು ತಿರುವಿಂ
ದುಗುಳಚಿದಡಾ ಭೂತದಂಘ್ರಿಗೆ
ಮುಗಿದ ಕೈಗಳಲೆಱಗಿದರು ಶಸ್ತ್ರಾಧಿದೇವಿಯರು।
ಉಗಿದನೊಱೆಯಲಡಾಯುಧವನು
ಬ್ಬಿಗದಲಪ್ಪಳಿಸಿದಡೆ ಕಯ್ಯಿಂ
ಜಗುಳ್ದುಬಿದ್ದುದು [5]ಝುಂಕೆಯದ್ದುದು ಭಯದ ಝಾಡಿಯಲಿ[5] ॥ ೧೯

ಕಾಕಮುಖದ ಮಯೂರ ಟಿಟ್ಟಿಭ
ಕೋಕವದನದ ಹಂಸ ಕಂಕ ಬ
ಳಾಕವಕ್ತ್ರದ ಗೌಜು ಗೀಜಗ ಚಾತಕಾನನದ।
ಘೂಕಮುಖದ ಸೃಗಾಲ ಶಾರ್ದೂ
ಲಾಕೃತಿಯ ಬಹುವಿಧದ ರೂಪದ
ನೇಕ ಭೂತವ್ರಾತ ನೆರೆದುದು ಭೂಪ ಕೇಳೆಂದ॥* ೨೦

ಇದು ವಿರೂಪಾಕ್ಷನ ಮನ[ಃ]ಕ್ಷೋ
ಭದ ವಿಕಾರವಲಾ ಪಿನಾಕಿಯು
ಪದವ ಹಿಡಿದೋಲೈಸುವೆನು ಸರ್ವಾಂಗಯಜ್ಞದಲಿ।
ಇದಕುಪಾಯವ ಬಲ್ಲೆನೆಂದು
ಬ್ಬಿದನುಬೊಬ್ಬಿ ಱಿದಾರಿ ತೋಡಿದ
ನುದರವಹ್ನಿಯನಿದಿರೊಳಗ್ನಿತ್ರಯವ ನಿರ್ಮಿಸಿದ॥ ೨೧

---

[1] ಟನ (ಘ). [2] ರವಸಂಘಟದರವ (ಕ). [3] ಹಿ (ಖ). [4] ಬಚ್ಚಿಸಿದವರೆ (ಕ), ಬೆಚ್ಚಿದವು ಗರಿ (ಖ), ವೆಚ್ಚಿಸಿದ ಗಱಿ (ಘ,ತ). [5] ಝುಂಕೆ ಮಿಗೆ ಭಾರಾಂಕ ಝಾಡಿಯಲಿ (ಖ). * ಈ ಪದ್ಯ (ಟ) ಪ್ರತಿಯಲ್ಲಿಲ್ಲ.

ಸೆರೆ ನರಂಗಳ ದರ್ಭೆ ಮಿದುಳಿನ
ಚರು ಕಪಾಲದ ಪಾತ್ರೆಯೆಲುವಿನ
ಬೆರಳ ಸಮಿಧೆ [1]ವಿಶಾಳದನುಮಜ್ಜೆಗಳ ಪೃಷದಾಜ್ಯ[1]।
ಅರುಣಜಲದಾಜ್ಯಾಹುತಿಯ ವಿ
ಸ್ತರವ ವಿರಚಿಸಿ ನಿಗಮಮಂತ್ರೋ
ಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ॥ ೨೨

ಮೆಚ್ಚಿದನು ಮದನಾರಿ ಹೋಮದ
ಕಿಚ್ಚು ತುಡುಕದ ಮುನ್ನ ತೆಗೆದನು
ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನು ಭಟನ।
ಎಚ್ಚ ಶರವಿದೆ ಖಡ್ಗವಿದೆಕೋ
ಮುಚ್ಚುಮಱೆಯೇಕಿನ್ನು ಸುತರಲಿ
ಚೊಚ್ಚಿಲವ ನೀನೆಂದು ಮೈದಡವಿದನು ಶಶಿಮೌಳಿ॥ ೨೩

ಸಾರಥಿಗಳೊಳಗೆನಿಸಿದನು ಭೂ
ಭಾರಭಂಜಕನಸುರಹರನೀ
ಭಾರ ಬಿದ್ದುದು ನಮಗೆ ಪಾಂಚಾಲಪ್ರಬದ್ಧಕರ।
ತೀರಿತಿದು [2]ನಿ[2]ಮ್ಮಲ್ಲಿ ನಮ್ಮ ವಿ
ಹಾರ[3]ವೊಡಬೆಚ್ಚಿತು[3] ರಿಪುವ್ರಜ
ಮಾರಣಾಧ್ವರಕೃತಿಯ ನೀ ಕೈ[4]ಕೊಳಿ[4]ಸು ಹೋಗೆಂದ॥ ೨೪

ಎನೆ ಪುರಾರಿಯ ಪದಯುಗಕೆ ಗುರು
ತನುಜ ಮೈಯಿಕ್ಕಿದನು ಬೀಳ್ಕೊಂ
ಡನು ತಿರೋಹಿತನಾದನೀಶ್ವರನೀತನನು ಕಳುಹಿ।
ಧನುವ ಕೊಂಡನು ಧೂರ್ಜಟಿಯ ರೂ
ಹಿನ ಮಹಾರಥ ರಥವನೇಱಿದ
ನನುವರದ ರೌರವವನಂಘೈಸಿದನು ರಜನಿಯಲಿ॥ ೨೫

ಧರಣಿಪತಿ ಕೇಳ್ ರಾಜಬೀದಿಯೊ
ಳುರವಣಿಸಿ ಗುರುಸೂನು ರಥದಲಿ
ಬರುತ ಕಂಡನಲೈ ಯುಧಿಷ್ಠಿರ ರಾಜಮಂದಿರವ।

[1] ಯನಾಳದನುಮಜ್ಜೆಗಳ ಚರುವಿನಲಿ (ಖ), ಶತಾನುದನುಮಜ್ಜೆಗಳ ಮಿಗೆ ರಚಿಸಿ (ಘ), ಯಸಾಲದನುಮಜ್ಜೆಗಳಪ್ರಸರಣದ (ಟ, ದ). [2] ನ (ತ). [3] ಒಡಬೆಚ್ಚುವುದು (ಕ), ಪೊಡೆವೊಚ್ಚಿತು (ಖ), ಒಡವೊಚ್ಚಿತು (ಘ), ಪೊಡೆ ಬೆಚ್ಚಿತು (ತ). [4] ವಳ (ಕ).

ಇರರು ಪಾಂಡವರಿಲ್ಲಿ ಮೇಣವ
ರಿರಲಿ ಬಳಿಕಾರ್ಯೆವೆನಯ್ಯನ
ಹರಿಬ ಹೋಗಲಿ ಮುನ್ನ ಕೊಲುವೆನು ದ್ರುಪದನಂದನನ॥ ೨೬

ಎಂದು ರಾಯನ ಗುಡಿಯು ಗೂಢದ
ಮಂದಿರದ ಬಲವಂಕವೀಧಿಯು
ಮುಂದೆ ಧೃಷ್ಟದ್ಯುಮ್ನನರಮನೆಗಾಗಿ ವಹಿಲದಲಿ।
ಬಂದು ಬಾಗಿಲ ಮುಱಿದು ಕಾಹಿನ
ಮಂದಿಯನು ನಿಡುನಿದ್ರೆಗೈಸಿದ
ನಂದು [1]ಮಿಣ್ಣನೆ[1] ಹೊಕ್ಕನಾತನ ಸೆಜ್ಜೆಯೋವರಿಯ॥ ೨೭

ತೊಳತೊಳಗುವಿಕ್ಕೆಲದ ದೀಪದ
ಬೆಳಗಿನಲಿ ಮಣಿ[2]ರುಚಿಯ[2] ಚಿತ್ರಾ
ವಳಿಯ ಮೇಲ್ಕಟ್ಟಿನಲಿ ಲಲಿತಸ್ತರಣಮಧ್ಯದಲಿ।
ಹೊಳೆಹೊಳೆವ ನವರತ್ನಭೂಷಣ
ಕಳಿತಕಾಯನ ಕಂಡು ರೋಷ
ಪ್ರಳಯ ಭೈರವರೂಪನೊದೆದನು ವಾಮಪಾದದಲಿ॥ ೨೮

ಘಳಿಲನೆದ್ದನಿದಾರು ನಿದ್ರೆಯ
ನಳಿದವನ ತಿವಿಯೆನುತ ಮುಂದಣ
ವಿಳಯರುದ್ರನ ರಹಿಯ ರೌದ್ರದ ರಣಭಯಂಕರನ।
ನಿಲವ ಕಂಡನಡಾಯುಧವ ತಾ
ಹಲಗೆಯಾವೆಡೆಯೆಂಬವನ ಮುಂ
ದಲೆಯ ಹಿಡಿದಡಗೆಡಹಿ [3]ಕುಸುಕಿಱಿದರಿಯನಸಬಡಿದ[3]॥ ೨೯

[4]ಉಗಿದು[4] ಬಿಲ್ಲಿನ ತಿರುವ ಕೊರಳಲಿ
ಬಿಗಿಯೆ ಭಯದಲಿ ದ್ರುಪದಸುತ ಬೆರ
ಳುಗಳ ಬಾಯಲಿ ಬೇಡಿಕೊಂಡನು ದ್ರೋಣನಂದನನ।
ಉಗಿದಡಾಯ್ದದಲೆನ್ನ ಶಿರವನು
ತೆಗೆದು ಕಳೆ[5]ಯ್ಯೊ[5] ಶಸ್ತ್ರಘಾತದಿ
ನುಗುಳಿಸಸುವನು ತನಗೆ ವೀರಸ್ವರ್ಗವಹುದೆಂದ॥ ೩೦

---

[1] ದಿಮ್ಮನೆ (ಕ), ನುಣ್ಣಗೆ (ಟ.ದ). [2] ಖಚಿತ (ಖ.ತ.ಪ). [3] ಕುಸಿಯಿಱಿದರಿಯನಸಬಡಿದಾ (ಕ), ಕುಸುಬಿದನವನನಸಬಡಿದ (ಖ), ಕುಸುಕಿಱಿದರಿಯ ಸದೆಬಡಿಸಿ (ಘ.ತ), ಕುಸುಕಿಱಿದವನ ಸದೆಬಡಿದ (ಟ.ದ). [4] ಬಿಗಿದ (ಕ). [5] ಯಾ (ಕ).

ಅಕಟ ಗುರುಹತ್ಯಾಮಹಾಪಾ
ತಕಿಯೆ ನಿನಗೇ ಸ್ವರ್ಗ ದೇವ
ಪ್ರಕರ ನಿನ್ನನು ಹೊಗಿಸಿದಡೆ ಸುಡುವೆನು ಸುರಾಲಯವ।
[1]ಕ್ರಕಚ[1] ಕುಂಭೀಪಾಕಮುಖ ನಾ
ರಕದೊಳರಮನೆ ನಿನಗೆ ಕೌಕ್ಷೇ
ಯಕದ ಹತಿ ಗಡ ತನಗೆನುತ ಕಟ್ಟಿದನು ತಿರುವಿನಲಿ॥ ೩೧

ಉಱಲ ಹತ್ತಿಸಿ ಸೆಳೆಯೆ ಗೋಣಲಿ
ಗುಱುಗುಱಿಸಲಸು ಜಾಱಿದುದು ಬೊ
ಬ್ಬಿಱಿದು ಹೊಕ್ಕನು ಕದವನೊದೆದು ಶಿಖಂಡಿಯರಮನೆಯ।
ತಱಿದನಾತನನುತ್ತಮೌಂಜಸ
ನಱಸಿ ಹೊಯ್ದನು ಹೊಕ್ಕು ಬಾಗಿಲ
ಮುಱಿದು ಮೈ[2]ಗುಱಿ[2]ಹಿಸಿ ಯುಧಾಮನ್ಯುವ [3]ವಿದಾರಿ[3]ಸಿದ॥ ೩೨

ಗಜಬಜವಿದೇನೆನುತ ನಿದ್ರೆಯ
ಮಜಡರೊಳಗೊಳಗಱಿದರೀತನ
ಭುಜಬಲಕೆ ಮಲೆತವರ ಕಾಣೆನು ಸೃಂಜಯಾದಿಗಳ।
ರಜನಿಯಲಿ ರೌಕುಳವ ಮಾಡಿದ
ನಜಿತಸಾಹಸನಿತ್ತ ದ್ರುಪದಾ
ತ್ಮಜೆಯ ಭವನದ ಹೊರೆಗೆ ಬಂದನು ಪಾಂಡವರನಱಸಿ॥ ೩೩

ಇದು ಯುಧಿಷ್ಠಿರ ರಾಜಗೃಹವೆಂ
ದೊದೆದು ಕದವನು ಕಾಹಿನವರನು
ಸದೆದು ಹೊಕ್ಕನು ಸೆಜ್ಜೆಯಲಿ ಧರ್ಮಜನ ನಂದನನ।
ಒದೆದಡೆದ್ದನು ಸುರಗಿಯಲಿ ಕಾ
ದಿದನು ಖಡುಗವ ಜಡಿದು ನಿಮಿಷಾ
ರ್ಧದಲಿ ತಲೆಯನು ನೆಗಹಿ ಪ್ರತಿವಿಂಧ್ಯಕನನಸುಗಳೆದ॥ ೩೪

ಜನಪ ಕೇಳೈ ಬಳಿಕ ಸುತಸೋ
ಮನನು ಶ್ರುತಕೀರ್ತಿಯ ಶತಾನೀ
ಕನನು ಶ್ರುತವರ್ಮನನು ತಱಿದನು ದ್ರೌಪದೀಸುತರ।
ಜನಪರೈವರ ತಲೆಗಳೆಂದೇ
ಕನಕರಥದೊಳಗಿರಿಸಿ ಹೊಕ್ಕನು
ಮನೆಮನೆಗಳಲಿ ಸವಱಿದನು ಸೋಮಪ್ರಬದ್ಧಕರ॥ ೩೫

[1] ಪ್ರಕಟ (ಕ), ಪ್ರಕರ (ತ). [2] ಯುರು (ಖ.ಟ.ದ). [3] ವಿಭಾಗಿ (ಕ), ನಿವಾರಿ (ಖ), ವಿಭಾಡಿ (ಟ.ದ).

[1]ಸೀಳ ಬ[1]ಡಿದನು ಸಮರಥರ ಪಾಂ
ಚಾಳ ರಾವುತರನು ಮಹಾರಥ
ಜಾಲವನು ಜೋಧರನು ಭಾರಿಯ [2]ಪಾರಕ[2]ವ್ರಜವ।
ಸಾಲ ಹೊಯ್ದನು ಹುಯ್ಯಲಿಗೆ ಹೊಗು
ವಾಳೆ ತಱಿದನು ಖಡ್ಗಮುಷ್ಟಿಯ
ಕಾಲಭೈರವ ಬೀದಿವರಿದನು ಕೇರಿಕೇರಿಯಲಿ॥ ೩೬

ಎಲೆಲೆ ಕವಿ ಕಳ್ಳೇಱುಕಾಱನ
ತಲೆಯ ಹೊಯ್ ಹೊಯ್ಯೆನುತ ನಿದ್ರಾ
ಕುಳರು ಗರ್ಜಿಸುತಾಗುಳಿಸಿ ತೂಕಡಿಸಿದರು ಮರಳಿ।
ಕೆಲಕೆಲಬರರೆನಿದ್ರೆಗಳ ಕಳ
ವಳಿಗರೊಱೆಗಳ ಕೊಂಡಡಾಯ್ದುವ
ನೆಲಕೆ ಬಿಸುಟರು ಬತ್ತಳಿಕೆಯಲಿ ಹೂಡಿದರು ಧನುವ॥ ೩೭

ಗಜವ ಹಲ್ಲಣಿಸಿದರು ವಾಜಿ
ವ್ರಜಕೆ ಱೆಂಚೆಯ ಹಾಯ್ಕಿದರು ಗಜ
ಬಜವಿದೇನೇನೆನುತ ಗಾಲಿಗ ಬಿಗಿದು ಕುದುರೆಗಳ।
ರಜನಿ ಬಂದುದೆ ಹಗಲು ಹೋಯಿತೆ
ಗಜಬಜದೊಳಕಟೆನುತ ಸುಭಟ
ವ್ರಜಸುವಿಹ್ವಳಕರಣರಿಱಿದಾಡಿದರು ತಮ್ಮೊಳಗೆ॥ ೩೮

ಲಾಯದಲಿ ಹೊಕ್ಕಿಱಿದು ಕುದುರೆಯ
ಬೀಯ ಮಾಡಿದನಂತಕಂಗೆಯು
ಡಾಯುಧದ ಧಾರೆಯಲಿ ಕೊಟ್ಟನು ಕುಂಜರವ್ರಜವ।
ರಾಯದಳ ಧರೆಯಂತೆ ನವಖಂ
ಡಾಯಮಾನವಿದಾಯ್ತು ಪಾಂಡವ
ರಾಯ ಕಟಕವ ಕೊಂದನಶ್ವತ್ಥಾಮ ಬೇಸಱದೆ॥ ೩೯

ದೊರೆಗಳೇನಾದರೊ ಯುಧಿಷ್ಠಿರ
ನರ ವೃಕೋದರ ನಕುಲ ಸಹದೇ
ವರು ಮುರಾಂತಕ ಸಾತ್ಯಕಿಗಳೊಳಗಿಹರೆ [3]ರೌರವ[3]ಕೆ।
ಹರನ ಖತಿಯೋ ಲಯಕೃತಾಂತನ
ವಿರಸಕೃತಿಯೋ ಸರ್ವದಳಸಂ
ಹರಣಕೇನು ನಿಮಿತ್ತವೆಂದುದು ಭೂಸುರವ್ರಾತ॥ ೪೦

---

[1] ಸೀಳೆಬ (ಖ), ಬೀಳಬ (ಘ.ತ.ಪ), ಸೀಳಿಸಿ (ಟ.ದ). [2] ಪಾರಕ (ಖ), ಭಾರತ (ತ). [3] ರೌಕುಳ (ಟ.ಪ).

ಉಳಿದುದೇಳಕ್ಷೋಹಿಣೀದಳ
ದೊಳಗೆ ನಾರೀನಿಕರ ವಿಪ್ರಾ
ವಳಿ ಕುಶೀಲವ ಸೂತ ಮಾಗಧ ವಂದಿಸಂದೋಹ ।
ಸುಳಿವ ಕಾಣೆನು ಕೈದುವಿಡಿದರ
ನುಳಿದು ಜೀವಿಸಿದಾನೆ ಕುದುರೆಗ
ಳೊಳಗೆ ಜವಿಯಿಲ್ಲೇನನೆಂಬೆನು ಜನಪ ಕೇಳೆಂದ ॥ ೪೧

ಕೂಡೆ ಕಟ್ಟಿತು ಕಿಚ್ಚು ತೆಱಪಿನ
ಲೋಡುವಡೆ ಗುರುಸುತನ ಶರ ಮಿ
ಕ್ಕೋಡುವಡೆ ಬಾಗಿಲುಗಳಲಿ ಕೃತವರ್ಮ ಕೃಪರೆಸುಗೆ ।
ಕೂಡೆ ಮುಮ್ಮಳಿಯೆಱೆದುದೀ ಶರ
ಝಾಡಿಯಲಿ ಚತುರಂಗಬಲವ
ಕ್ಕಾಡಿತೇನೆಂಬೆನು ಯುಧಿಷ್ಠಿರನೃಪನ ಪರಿವಾರ ॥ ೪೨

ಬಸಿವ ರಕುತದದಡಾಯುಧದ ನೆಣ
ವಸೆಯ ತೊಂಗಲುಗರುಳ ಬಂಧದ
ವಸನ ಕೈಮ್ಮೈಗಳ ಕಠೋರಭ್ರುಕುಟಿ ಭೀಷಣದ ।
ಮಸುಡ ಹೊಗರಿನ ದಂತದಂಶಿತ
ದಶನವಾಸದ ವೈರಿಹಿಂಸಾ
ವ್ಯಸನ ವೀರಾವೇಶಿ ಬಂದನು ಕೃಪನ ಸಮ್ಮುಖಕೆ ॥ ೪೩

ಹೇಳಿದನು ಸೃಂಜಯವಧೆಯ ಪಾಂ
ಚಾಲ ರಾಜಕುಮಾರವರ್ಗದ
ಮೌಳಿಗಳ ಬಲಿಗೊಟ್ಟ ಪರಿಯನು ಖಡ್ಗಪೂತನಿಗೆ ।
ಪಾಳೆಯದೊಳಱಸಿ[1]ದೆ[1]ನು ಪಾಂಡುನೃ
ಪಾಲತನುಜರನವರು ಕೆಡುವರೆ
ಮೇಲುಗಾಹಿನ ವೀರನಾರಾಯಣನ ಕರುಣದಲಿ ॥ ೪೪

ಒಂಬತ್ತನೆಯ ಸಂಧಿ ಮುಗಿದುದು.

---

[1] ದ (ಕ).

# ಹತ್ತನೆಯ ಸಂಧಿ

---

ಸೂಚನೆ॥ ರಾಯಕಟಕವನಿಱಿದ ಗುರುಸುತ
ನಾಯುಧದ ವಿಗ್ರಹದೊಳಗೆ ಹರಿ
ಕಾಯಿದನು ಕೃಪೆಯಿಂದಲಭಿಮನ್ಯುವಿನ ನಂದನನ ॥

ಕೇಳು ಧೃತರಾಷ್ಟ್ರಾವನಿಪ ರಿಪು
ಜಾಲಗೀರ್ವಾಣೀಕದಂಬ
ಸ್ಥೂಲ[1]ವಕ್ಷನು[1] ಬಂದು ಕಂಡನು ಭೋಜಗೌತಮರ ।
ಲೀಲೆಯಲಿ ರಥವೇಱಿ ಕುರುಭೂ
ಪಾಲನಲ್ಲಿಗೆ ಬಂದರುಬ್ಬಿನ
ಮೇಲುಮದದ ಜಯಪ್ರಚಂಡರು ಕಂಡರವನಿಪನ ॥ ೧

ಬಲಿದ ಮಱವೆಯ ಕರಣವೃತ್ತಿಯ
ಕಳವಳದ ಪಂಚೇಂದ್ರಿಯದ ಪರಿ
ಚಲನಸಂಚದ ಶಿಥಿಲಮೂಲಾಧಾರಮಾರುತನ ।
ಅಲಘುತರಪರಿವೇದನಾವಿ
ಹ್ವಳಿತಕಂಠಗತಾತ್ಮನೂರ್ಧ್ವ
ಸ್ಖಲಿತದೀರ್ಘಶ್ವಾಸನಿದ್ದನು ಕೌರವರ ರಾಯ ॥ ೨

ಕಂಡು ಕಂಬನಿದುಂಬಿದರು ಭೂ
ಮಂಡಲಾಧಿಪ ವೈರಿಮದವೇ
ತಂಡ ಕೇಸರಿಯಿರವಿದೇ ಮಝು ಪೂತು ವಿಧಿಯೆನುತ ।
ಗಂಡುಗಲಿಯವಧಾನ ರಿಪುಬಲ
ದಂಡಧರನವಧಾನ ಕುರುಕುಲ
ಚಂಡಕರನವಧಾನವೆನುತೆಚ್ಚಱಿಸಿದರು ನೃಪನ ॥ ೩

ಕೆದಱಿದುದು ಕುಡಿನೋಟ ಕರಣದ
ಕದಡು ಹರೆದುದು ಇಂದ್ರಿಯಾವಳಿ
ತುದಿಗೊಳಿಸಿದುದು ಪವನ [2]ನಱಿಸಿತು[2] ನಾಭಿಪರಿಯಂತ ।

---

[1] ಲಕ್ಷನು (ಘ), ಲಕ್ಷಣ (ಟ). [2] ನರಸಿದ (ಖ), ನಱಸಿತು (ಘ.ತ).

ವದನವನು ನಸು ನೆಗಹಿ ನೃಪ ನುಡಿ
ಸಿದನಿದಾರಸ್ಮತ್ಪುರೋಭಾ
ಗದಲಿ ಸೇವಾಮಧುರವಚನವಿಳಾಸಪರರೆಂದ ॥ ೪

ನಾವು ನಿಮ್ಮವರೆಮ್ಮ ಬೊಪ್ಪನ
ಭಾವ ಕೃಪ ಕೃತವರ್ಮನೀತನು
ದೇವರವಧರಿಸುವುದು ರಜನಿಯ ರಾಜಕಾರಿಯವ ।
ನೀವು ಬಿನ್ನಹಮಾಡಬೇಹುದು
ಮಾವ ರಣಸಂಗತಿಯನಾತ್ಮ
ಸ್ತಾವಕರು ನಾವಲ್ಲವೆಂದನು ಕೃಪಗೆ ಗುರುಸೂನು ॥ ೫

ಏನನೆಂಬೆನು ಜೀಯ ದ್ರುಪದನ
ಸೂನು ಪಂಚದ್ರೌಪದೇಯರ
ಹಾನಿಯುನು ಸೃಂಜಯ ಶಿಖಂಡಿ ಪ್ರಮುಖರುಪಹತಿಯ ।
ವೈನತೇಯನ ಲಳಿಯಲಹಿಕುಲ
ವಾನುವುದೆ ಪಾಂಚಾಲಕದಳೀ
ಕಾನನವ ನಿನ್ನಾನೆ ಸವಱುತು ಹೇಳಲೇನೆಂದ ॥ ೬

ದೈವಕೃಪೆಜವನಿಕೆಯ ಮಱೆಗೊಂ
ಡೈವರುಳಿದರು ಮೇಲೆ ಸಾತ್ಯಕಿ
ದೈವದೊಡಹುಟ್ಟಿದನಲೇ ತಾನಿಲ್ಲ ಶಿಬಿರದಲಿ ।
[1]ದೈವಬಲವಿನಿತಕ್ಕೆ ಕೇಳ್ ನಿ
ರ್ದೈವ[1]ಬಲನಿಶ್ಶೇಷವಿನಿತೇ
ದೈವವೆತ್ತಿದ ಛಲದ [2]ವಾಸಿಗೆ ರಾಯ[2] ಕೇಳೆಂದ ॥ ೭

ಎಲೆ ಕೃಪಾಚಾರಿಯ ವಿರೋಧಿಗ
ಳುಳಿದಠ್ವೈವರು ಬಲ್ಲೆನದನಸ
ದಳದ ಕೃಪೆಯಲಿ ಬಸಿದು [3]ಬೀಳುವನವರಿಗಸುರಾರಿ[3] ।
ಅಳಿದುದೇ ನಿಶ್ಶೇಷ ಪಾಂಡವ
ದಳ ಕುಮಾರರು ಸಹಿತವಿನ್ನ
ಗ್ಗಳೆಯನಶ್ವತ್ಥಾಮನಹನೆಂದನು ಮಹೀಪಾಲ ॥ ೮

---

[1] ದೈವಬಲಯಿಳಿಕೆಯೊಳವಾ ನಿರ್ದೈವ (ಕ), ದೈವಬಲವೇಳಕ್ಕೆ ಕೇಳ ನಿರ್ದೈವ (ಖ), ದೈವಬಲಯೊಳಲತ್ರೆಯೊಳಾ ನಿರ್ದೈವ (ಘ.ತ), ದೈವಬಲವಿನಿತಕೆ ದಿಟ ದೈವ (ಟ.ದ). [2] ಭಾಷೆಯ ದಾಯ (ಟ.ದ). [3] ಬೀಳ್ದನವರ್ಗೆ ಮುರ ವೈರಿ (ಕ).

ಏನನೊದಗಿದ ನಮಗೆ ಗಂಗಾ
ಸೂನು ಭಾರದ್ವಾಜ ನಮಗೊಲಿ
ದೇನ ಮಾಡಿದ ನಮ್ಮ ಥಟ್ಟಿನ ಭದ್ರಗಜವೆಂಬ।
ಮಾನನಿಧಿ ರಾಧಾತನುಜನಿಂ
ದೇನು ಪರಿದುದು ಹರಿಬವನು ಗುರು
ಸೂನುವೇ ಮರಳಿಚಿದನೆಂದನು ಕೌರವರರಾಯ॥ ೯

ಹರಿಬ ಬಂದುದೆ ಪಾಂಡುಸುತರುಳಿ
ದಿರಲಿ ಸಾಕಂತಿರಲಿ ನಿಮ್ಮಡಿ
ಪುರಕೆ ಬಿಜಯಂಗೆಯ್ಯಿರೇ ಚೈತನ್ಯಗತಿಯೆಂತು।
ಹರಣವುಳಿದಡೆ ಪಾಂಡುತನುಜರ
ಶಿರವ ಕೇವಣಿಸುವೆನಲೈ ಕೇ
ಸರಿಯ ಪೀಠದೊಳೆಂದನಶ್ವತ್ಥಾಮ ಕೈಮುಗಿದು॥ ೧೦

ಸಾಕದಂತಿರಲಿನ್ನು [1]ವೈರಿ[1]
ವ್ಯಾಕರಣಪಾಂಡಿತ್ಯದಲ್ಲಿ ವಿ
ವೇಕಶೂನ್ಯರು ನಾವು ಮೊದಲಾದೌರ್ಧ್ವದೈಹಿಕವ।
ಆಕೆವಾಳರಿಗಱುಹಿ ನೀವ
ಸ್ತೋಕಪುಣ್ಯರ ತಿಳುಹಿ ವಿಗಳಿತ
ಶೋಕರೆನಿಸುವುದಂಧನೃಪ ಗಾಂಧಾರಿದೇವಿಯರ॥ ೧೧

ಎನುತ ಕಣ್ ಮುಚ್ಚಿದನು ಜೀವಾ
ತ್ಮನು ಜವಾಯಿಲತನದಲೊಡೆಹಾ
ಯ್ದನು ಸುನಾಸಾಲಂಬಿತಶ್ವಾಸದ ಸಮಾಪ್ತಿಯಲಿ।
ಜನಪ ಮಱೆದೊಱಗಿದನಲಾ ಹಾ
ಯೆನುತ ವದನಾಂಜುಳಿಪುಟದ ತಾ
ಡನದಲಿವರಳಲಿದರು ಕುರುರಾಜಾವಸಾನದಲಿ॥ ೧೨

ತಿರುಗಿದರು ಕೈದುವ ಬಿಸುಟು ಮೂ
ವರು ಮಹಾರಥರಂಧತಿಮಿರಕೆ
ತರಣಿಕಿರಣದ ಧಾಳಿ ಹರಿದುದು ಕೂಡೆ ದೆಸೆದೆಸೆಗೆ।
ಅರಸನುಪ್ಪವಡಿಸಿ ಮುರಾರಿಯು
ಸಿರಿಮೊಗವ ನೋಡಿದನು ತಮ್ಮಂ
ದಿರು ಸಹಿತ ಹೊಱವಂಟನಾ ಕುರುಪತಿಯ ಪಾಳೆಯವ॥ ೧೩

---

[1] ಸಮರ (ಟ.ದ).

ಪಾಳೆಯದಲಿ ಕುಮಾರರನು ಪಾಂ
ಚಾಲರನು ನೋಡುವೆವೆನುತ ಭೂ
ಪಾಲ ನಡೆತರಲಿದಿರುವಂದುದು ಯುವತಿನಿಕುರುಂಬ ।
ಸೂಳುವೊಯ್ಲಿನ ತೆಳುವಸುಱ ಕರ
ತಾಳದಲಿ ಹಾಹಾವಿರಾವದ
ಮೇಳವದ ಗೀತದಲಿ ಬಂದಳು ದ್ರೌಪ[1]ದೀ[1]ದೇವಿ ॥ ೧೪

ಏನಿದೇನದುಭುತವೆನುತ ದು
ಮ್ಮಾನದಲಿ ಹರಿತಂದು ಹಿಡಿದನು
ಮಾನಿನಿಯ ಕೈಗಳನು ಕಂಬನಿದೊಡೆದು ಸೆಱಗಿನಲಿ ।
ಹಾನಿಯೇನೆನೆ ಮಡಿದರೆನ್ನಯ
ಸೂನುಗಳು ತನ್ನನುಜ[2]ರೆ[2]ನೆ ಪವ
ಮಾನಸುತ ಕೇಳಿದನು ಕೋಳಾಹಳವ ಗುರುಸುತನ ॥ ೧೫

ಸುತರ ತಲೆಯ್ಯೊದಕ್ಕೆ ರಿಪುಗುರು
ಸುತನ ತಲೆಯೇ ಹೋಣೆ ಕಣಾ ಬಿಡು
ಸತಿಯೆ ಶೋಕವನೆನುತ ಬಿಟ್ಟನು ಸೂಠಿಯಲಿ ರಥವ ।
ವ್ಯತಿಕರವಿದವಗಡ ಸಮೀರನ
ಸುತಗೆ ಹಱಿಯದು ಬವರ ನಡೆಯೆಂ
ದತಿರಥನ ಬಳಿಸಲಿಸಿದರು ನೃಪ ಹರಿ ಧನಂಜಯರು ॥ ೧೬

ನಿಲ್ಲು ಗುರುಸುತ ಶೌರ್ಯಪಣ ನ
ಮ್ಮಲ್ಲಿಯೇ ಹುಲುಜೀವರಿಗೆ ಜವ
ನಲ್ಲಿ ಮೇಳವೆಯುಗುಳು ಪಂಚದ್ರೌಪದೀಸುತರ ।
ಬಿಲ್ಲ ಗುರು ನೀನಾದಡೆಮಗೇ
ನಿಲ್ಲಿ ದ್ರೌಪದಿಯಕ್ಷಿಜಲಕೃಪೆ
ಯಲ್ಲಿ ಲಂಬಿಸಬೇಕೆನುತ ಮೂದಲಿಸಿದನು ಭೀಮ ॥ ೧೭

ಎಲವೊ ಶರಸಂನ್ಯಾಸವನು ಕುರು
ತಿಲಕನವಸಾನದಲಿ ಮಾಡಿದೆ
ನಳಲಿದಡೆ ಫಲವೇನು [3]ನಮ್ಮಾ ಸ್ವಾಮಿ[3] ಕಾರ್ಯದಲಿ ।
ತಲೆಯ ಹೊಯ್ದೆನು ನಿನ್ನವರ ನೀ
[4]ವ[4]ಳುಕಿ ರಣದೊಳಗಡಗಿ ಜೀವವ
ನುಳುಹಿಕೊಂಡಿರಿ ಕೊಲುವೆನಲ್ಲದೊಡೆಂದನಾ ದ್ರೌಣಿ ॥ ೧೮

---

[1] ದಾ (ಸ.-ತ). [2] ನೆ (ತ). [3] ನೀಮತ್ಸ್ವಾಮಿ (ಕ), ನಾನೀಸ್ವಾಮಿ (ಟ.ದ). [4] ನ (ಸ).

ಮರುಳಲಾ ಗುರುಸುತ ಯುಧಿಷ್ಠಿರ
ನಿರೆ ವಿಭಾಡಿಸುವಾ ಮೃಗೇಂದ್ರನ
ಗರವಟಿಗೆಯಲಿ ಬಡಸೃಗಾಲನ ಬಾಧೆ ಬಲುಹು ಗಡಾ।
ಕುರುನೃಪತಿಯಾಸ್ಥಾನವಲ್ಲು
ಬ್ಬರಿಸಿ ಬೊಬ್ಬಿಡಲಾಹವಾಂತ
[1]ಸ್ಸರಣಿ[1] ಗುರುಸುತ ನಿನಗೆ ಸದರವೆಯೆಂದನಸುರಾರಿ॥ ೧೯

ಕಾಯಬಲ್ಲೈ ಪಾಂಡವರನು ನಿ
ರಾಯುಧರು ನಾವೆಂದು ನೀ ನಿ
ರ್ದಾಯದಲಿ ನಿನ್ನವರು ಹೊಗುವರೆ ಹಸ್ತಿನಾಪುರವ।
ಸಾಯಕವ ಪರಿಹರಿಸು ಪಾಂಡವ
ರಾಯಜೀವಿ ಗಡೆನುತ ವರ ಚ
ಕ್ರಾಯುಧನ ಬೋಳೈಸಿ ತೃಣದಿಂದಿಟ್ಟನಾ ದ್ರೌಣಿ ॥ * ೨೦

ಆ ಮಹಾಮಂತ್ರಾಭಿಮಂತ್ರಿತ
ಭೀಮವಿಕ್ರಮತೃಣವನಶ್ವ
ತ್ಥಾಮನಿಡೆ ಲೋಕತ್ರಯಕ್ಷೋಭ[2]ಪ್ರಭಂಜನವ[2]।
ವ್ಯೋಮಕೇಶಲಲಾಟವಿಶ್ರುತ
ಧೂಮಕೇತು[3]ಶಿಖಾವಿಸಂಸ್ಫುಳ
ಧೂಮಚುಂಬಿತ ಖಚರಚಯ ಭೂರಿಸಿತು ರಿಪುನೃಪರ[3]॥ ೨೧

ಅವನಿಪತಿ ಕೇಳೈ ಮಹಾವೈ
ಷ್ಣವದ ಸತ್ರಾಣವನು ಗುರುಸಂ
ಭವನ ಮಂತ್ರದ ಪಾಡಿ ನಡಪಾಡಿಸಿತು ಪಾಂಡವರ।

---

[1] ಸ್ಸರಣ (ಖ), ಕರಣಿ (ಟ.ದ), ಕರುಣಿ (ತ). * ಈ ಪದ್ಯವಾದ ಮೇಲೆ (ಗ) ಪ್ರತಿಯಲ್ಲಿ ಮುಂದಿನ ಪದ್ಯ ಹೆಚ್ಚಾಗಿದೆ :—

ಹರಿಯುಬಹುದೈ ಮೂರು ಪೊಕ್ಕಕ। ವರವ ರಾವುತಪಾಯಕರು ನಿನ
ಗುರುವಮಂತ್ರಾಸ್ತ್ರಂಗಳುಂಟೆಂದಱಿಯಬಹುದೆನುತ।
ಮುರಿದು ತೃಣದಿಂದಿಟ್ಟು ಬಲವನು। ತರಿದು ಶಿಶುಪಶುವಾದಿಯಾಗಿ
ರ್ದಗಿಸಿ ಛೇದಿಸೆನುತ್ತ ಗುರುಸುತನಿಟ್ಟ ರೋಷದಲಿ॥

[2] ಪ್ರಚಂಡ-ನವ (ಕ), ಪ್ರಚಂಡಮಯ (ಖ.ಫ.ತ). [3] ವಿಶಾಭಿಸಂಸ್ಫುಳ ಧಾಮಚುಂಬಿತ ಖಚರಚಯ ಭಾರಿಸಿತು ರಿಪುನೃಪರ (ಕ), ಶಿಖಾಭಿಸಂಸ್ಫುಳ ಧೂಮ ಚುಂಬಿತ ಖಚರಶರ ಚೂರಿಸಿತು ರಿಪುನೃಪರ (ಖ), ಸಿತೋವಿಸಂಸ್ಫುಳ ವಾಮಲಂಬಿತ ಖಚರಶರ ಭೂರಿಸಿತು ನೃಪರುಗಳ (ಫ), ಜ್ವಾಲೆಯೊನೆ ತದ್ಧಾಮಚುಂಬಿಸಿತರಿ ನೃಪರನೇನೆಂಬೆನದ್ಭುತವ (ಟ.ದ), ಶಿಖಾವಸಂಸ್ಫುಳ ವಾಮಚುಂಬಿತ ಖಚರಚಯ ಭೂರಿಸಿತು ನೃಪರುಗಳ (ತ).

ತವಕದಲಿ ತೃಣಬಾಣವಭಿಮ
ನ್ಯುವಿನ ರಾಣೀವಾಸದುದರೋ
ದ್ಭವದ ಗರ್ಭಕೆ ಮುರಿದು ಹರಿದುದು ಸೂಕ್ಷ್ಮರೂಪದಲಿ॥ ೨೨

ಜಗವ ಹೂಡುವ ಮೇಣ್ ಚತುರ್ದಶ
ಜಗದ ಜೀವರನೂಡಿಯುಣಿಸುವ
ಜಗವನಂತರ್ಭಾವದಲಿ [1]ಬಲಿಸುವ ಗುಣತ್ರಯದ[1]।
ಸೊಗಡು ತನ್ನ ಸಹಸ್ರಧಾರೆಯು
ಝುಗೆಯೊಳೆನಿಪ ಮಹಾಸುದರ್ಶನ
ಬಿಗಿದು ಸುತ್ತಲು ವೇಢೆಯಾಯ್ತುತ್ತರೆಯ ಗರ್ಭದಲಿ॥ ೨೩

ಸೆಳೆದುಕೊಂಡನು ಮೃತ್ಯುವಿನ ಗಂ
ಟಲಲಿ ಮಾರ್ಕಂಡೇಯನನು ರಣ
ದೊಳಗೆ ಭಗದತ್ತಾಂಕುಶದಿ ನಾರಾಯಣಾಸ್ತ್ರದಲಿ।
ಉಳುಹಿದನು ಪಾರ್ಥನನು ಗುರುಸುತ
ಕಳುಹಿದೀ [2]ಕುಶಿಕಾಸ್ತ್ರದಲಿ[2] ಶಶಿ
ಕುಲದ ರಾಜಾಂಕುರವ ಕರುಣಿಸಿ ಕಾಯ್ದನಸುರಾರಿ॥ ೨೪

ತೀರಿತೈ ಕುಶಿಕಾಸ್ತ್ರಘಾತಿ ಮು
ರಾರಿ ಗುರುಸುತರೊಬ್ಬರೊಬ್ಬರ
ವೀರಪಣವಾಸಿಯಲಿ ಶಪಿಸಿದರಧಿಕರೋಷದಲಿ।
ನಾರಿಯಂತಸ್ತಾಪವಹ್ನಿನಿ
ವಾರಣಕೆ ಜಲವೀತನೆಂದಾ
ಚಾರಿಯನ [3]ನಂದನನ ಹಿಡಿದರು ಭೀಮ ಫಲುಗುಣರು[3]॥ ೨೫

ಬಂದಳಾ ದ್ರೌಪದಿಯಹಹ ಗುರು
ನಂದನನ ಕೊಲಬಾರದಕಟೀ
ನಂದನರ ಮರಣದ ಮಹಾವ್ಯಥೆಯಿಾತನಳಿವಿನಲಿ।
ಕೊಂದುಕೂಗದೆ ಕೃಪೆಯನಬಲಾ
ವೃಂದ ಸಮಸುಖದುಃಖಿಗಳು ಸಾ
ರೆಂದು ಭೀಮಾರ್ಜುನರ ತೆಗೆದಳು ಬಳಿಕ ಪಾಂಚಾಲಿ॥ ೨೬

---

[1] ಭಾವಿಪತ್ರ್ಯೈಗುಣದ (ಕ), ಚರಸುವ ಗುಣತ್ರಯದ (ಘ), ಭುಜಿಸುವ ಗುಣತ್ರಯದ (ಟ.ದ). [2] ವೈಶಿಕಾಸ್ತ್ರದಲಿ (ಖ), ವಿಶಿಖಾಸ್ತ್ರದಲಿ (ಘ), ಕುಶಿಯಸ್ತ್ರದಲ (ಟ.ದ), ವೈಸಿಕತಾಪದಲಿ (ತ). [3] ಸುತನನು ಹಿಡಿದವರ ಬಾಚಿದರು ಸಿರಿಮುಡಿಗೆ (ಕ).

ತಲೆಯ ಕೊಂಬವಗಡದ ಭಾಷೆಯ
ಸಲಿಸಲೆಂದಾ ದ್ರೋಣತನುಜನ
ಹೊಳೆವ ಮಕುಟದ ಮಾಣಿಕವ ಕೊಂಡುತ್ತರಾಯದಲಿ।
ಗೆಲಿದು ತಿರುಗಿದರಿವರು ಸಾಹಸ
ವಳುಕಿಸದೆ ಮೂಜಗವ ಯದುಕುಲ
ತಿಲಕ ಗದುಗಿನ ವೀರನಾರಾಯಣನ ಕರುಣದಲಿ॥ ೨೭

ಹತ್ತನೆಯ ಸಂಧಿ ಮುಗಿದುದು.

# ಹನ್ನೊಂದನೆಯ ಸಂಧಿ

---

**ಸೂಚನೆ॥** ರಾಯನಯ್ಯನ ತಿಳುಹಿದನು ದ್ವೈ
ಪಾಯನನು ಸಾವದಲಿ ಕಮಳದ
ಳಾಯತಾ[1] [ಕ್ಷಿಯು][1] ಶಾಪವಿತ್ತಳು ಮುಳಿದು ಗಾಂಧಾರಿ॥

ಕೇಳು ಜನಮೇಜಯ ಧರಿತ್ರೀ
ಪಾಲ ಕುರುಪತಿವಿಳಯವಾರ್ತಾ
ವ್ಯಾಳವಿಷ ವೇಢೈಸಿದುದು ಗಜಪುರದ ಜನಮನವ।
[2]ಹೊಳೆದುಬ್ಬಿನ[2] ಹುದಿದ ಮೋನದ
ಸೂಳುಚಿಂತೆಯ ಬಲಿದ ಭೀತಿಯ
ಮೇಲುದುಗುಡದ ದಡಿಯ ವದನದಲಿದ್ದುದಖಿಳಜನ॥ ೧

ಆ ಸಮಯದಲಿ ದೇವ ವೇದ
ವ್ಯಾಸಮುನಿ ಬಂದನು ಗತಾಕ್ಷಮ
ಹೀಶನನು ಚರಣದಲಿ ಹೊರಳಿವಡೆತ್ತಿದನು ಹಿಡಿದು।
ಆ ಸತಿಯ ಕರಸಿದನು ರಾಣೀ
ವಾಸವೆಲ್ಲವ ಬರಿಸಿ ಧರ್ಮವಿ
ಲಾಸವನು ವಿಸ್ತರಿಸಿದನು ವೈದಿಕವಿಧಾನದಲಿ॥ ೨

ನಿನ್ನ ಸುತನುದ್ದಂಡತನದಲಿ
ನಿನ್ನ ತಮ್ಮನ ತನುಜರನು ಪರಿ
ಖಿನ್ನರನು ಮಾಡಿದನು ಕಪಟದ್ಯೂತಕೇಳಿಯಲಿ।
ನಿನ್ನ ಮತ ವಿದುರೋಕ್ತಿಗಳ ಮೇಣ್
ಮನ್ನಿಸಿದನೇ ಜಗವಱಿಯೆ ಸಂ
ಪನ್ನ ಶಠನಹನೈ ಸುಯೋಧನನೆಂದನಾ ಮುನಿಪ॥ ೩

ಸ್ಮರಿಸಿದರೇ ಪಾಂಡುಸುತರಂ
ಭೋರುಹಾಕ್ಷಿ ರಜಸ್ವಲೆಯ ಸುಲಿ
ಸೀರೆಯಲಿ ತತ್ಪೂರ್ವಕೃತ ಜತುಗೇಹದಾಹದಲಿ।

---

[1] ಕ್ಷಿಗೆ (ಸ). [2] ತೊಳೆದುಬ್ಬೆಯ (ಟ.ದ), ಹೊಳೆದುಬ್ಬೆಯ (ತ).

ವೈರಬಂಧದ ವಿವಿಧ ವಿಷಮ ವಿ
ಕಾರದಲಿ ವಿಗ್ರಹಮುಖವ ವಿ
ಸ್ತಾರಿಸಿದರೇ ಪಾಂಡುಸುತರುತ್ತಮರೆ ಹೇಳೆಂದ॥* ೪

ಅವರು ಸುಚರಿತರೆಂದಲೇ ಮಾ
ಧವನು ನೆಱೆ ಮರುಳಾದನವರಿಗೆ
ಶಿವನು [1]ಮೆಚ್ಚಿದು[1] ಶರವನಿತ್ತನು ನರನ ಪತಿಕರಿಸಿ।
ಭುವನವೆರಡಾದಲ್ಲಿ ಸಾಧುಗ
ಳವರ ದೆಸೆ ದುಸ್ಸಾಧುಗಳು ನಿ
ನ್ನವರ ದೆಸೆಯಾಯ್ತರ್ಜುನನ ಸೂತಜನ ಸಮರದಲಿ॥* ೫

ಅಹುದು ನಿಮ್ಮ ಯುಧಿಷ್ಠಿರನು ಗುಣಿ
ಯಹನು ಭೀಮಾರ್ಜುನರು ಬಲ್ಲಿದ
ರಹರು ಕೃಷ್ಣನ ಕೂರ್ಮೆಯಲ್ಲಿ ಕಪರ್ದಿಯೊಲವಿನಲಿ।
ಕುಹಕಿಯೆನ್ನವನವನೊಳಗೆ ನಿ
ಸ್ಪೃಹರು ವಿದುರಪ್ರಮುಖ ಸುಜನರು
ವಿಹಿತವನಗಿನ್ನಾವುದದ ನೀವ್ ಬೆಸಸಿ ಸಾಕೆಂದ॥ ೬

ಧರ್ಮವೆಲ್ಲಹುದಲ್ಲಿ ಜಯ ಸ
ತ್ಕರ್ಮವೆಲ್ಲಹುದಲ್ಲಿ ಸಿರಿ ಸ
ದ್ಧರ್ಮಸಂರಕ್ಷಕರು ಹರಿ ಧೂರ್ಜಟಿ ಪಿತಾಮಹರು।
ಧರ್ಮದೂರನು ನಿನ್ನವನು ಸ
ತ್ಕರ್ಮಬಾಹಿರನಾತ್ಮರಚಿತ ವಿ
ಕರ್ಮದೋಷದಲಳಿದನಿನ್ನೇನೆಂದನಾ ಮುನಿಪ॥ ೭

ಎನಲು ಬಿದ್ದನು ನೆಲಕೆ ಸಿಂಹಾ
ಸನದಿನಾ ಮುನಿವಚನಶರ ಮಱು
ಮೊನೆಗೆ ಬಂದುದು ಬಹಳ ಮೂರ್ಛಾಪಾರವಶ್ಯದಲಿ।
ಜನಪನಿರೆ ಗಾಂಧಾರಿ ನೃಪಮಾ
ನಿನಿಯರೊಱಲಿತು ರಾಜಗೃಹ ರೋ
ದನ ಮಹಾಧ್ವನಿ ಮೀಱು ಮೊಗೆದುದು ಹಸ್ತಿನಾಪುರವ॥ ೮

* ಈ ಪದ್ಯಗಳು (ಘ) ಪ್ರತಿಯಲ್ಲಿಲ್ಲ. [1] ನಚ್ಚಿದ (ಕ.ತ), ಮೆಚ್ಚಿನ (ಟ.ದ).

ಆರು ಸಂತೈಸುವರು ಲೋಚನ
ವಾರಿ ಹೊನಲಾಯ್ತ್ರ ರಮಣಿಯು ನೃಪ
ನಾಥಿಯರ ಬಹಳಪ್ರಲಾಪವ್ಯಥೆಯ ಬೇಳುವೆಗೆ।
ಆರು ಮಱುಗರು ಶೋಕಪನ್ನಗ
ಘೋರವಿಷ ಮುನಿವ್ವರನ ಹೃದಯುವ
ಗೋರಿತೇನೆಂದೆನು ಲತಾಂಗಿಯರಳಲ ಕಳವಳವ॥ ೯

ಎತ್ತಿದರು ಧರಣಿಪನ ಕಂಗಳೊ
ಳೊತ್ತಿದರು ಪನ್ನೀರನುಸುರಿನ
ತತ್ತಳವನಾರೈದರೊಯ್ಯನೆ ತಾಳವೃಂತದಲ।
ಬಿತ್ತಿ ತಂಗಾಳಿಯನು ಶೋಕದ
ಹತ್ತಿಗೆಗೆ ಹೊರೆದೆಗೆದು ಮಱವೆಯ
ಚಿತ್ತವನು ಚೇತರಿಸಿ ಮೆಲ್ಲನೆ ನುಡಿಸಿದನು ಮುನಿಪ॥ ೧೦

ಏನನೆಂದೆವು ಹಿಂದೆ ಧರ್ಮನಿ
ಧಾನ[1]ವನು ಕಯ್ಯೊಡನೆ ಮಱದೆಯಿ
ದೇನು ನಿನ್ನಯ ಮತಿಯು ವಿಭ್ರಮೆ ನಮ್ಮ ಹೇಳಿಕೆಗೆ[1]।
ಭಾನುಮತಿಯ[2]ನು[2] ತಿಳುಹು ನಿನ್ನಯ
ಮಾನಿನಿಯ ಸಂತೈಸು ಸಂಸಾ
ರಾನುಗತಿ ತಾನಿದು ಚತುರ್ದಶಜಗದ ಜೀವರಿಗೆ॥ ೧೧

ಬಹ [3]ವಿಪತ್ತಿನ ಶರಕೆ ಪೋಡೆಂ
ದಿಹುದಲಾ[3] ಸುವಿವೇಕಗತಿ ನಿ
ರ್ದಹಿಸದೇ ಶೋಕಾಗ್ನಿ ಧರ್ಮದ್ರುಮದ ಬೇರುಗಳ।
ಅಹಿತರೇ ಜನಿಸಿದಡೆ ಸುತರೆನ
ಬಹುದೆ ದುರ್ಯೋಧನನು ಹಗೆ ನಿನ
ಗಿಹಪರದ ಸುಖಗತಿಗೆ ಸಾಧನ ಧರ್ಮಸುತನೆಂದ॥ ೧೨

ಕೇಳು ಮುನಿಭಾಷಿತವ ನೃಪನೀ
ನಾಲಿಸುವುದಾತ್ಮಜರನಿಲ್ಲಿಂ
ಮೇಲೆ ಸಲಿಲಾಂ[4]ಜಲಿ[4]ಗಳನು ವೈದಿಕವಿಧಾನದಲ।

---

[1] ವನು ನಿನ್ನವನ ಧರ್ಮವಿಧಾನವನು ಕಯ್ಯೊಡನೆ ಮಱದ್ಮೆ ನಮ್ಮ ಹೇಳಿಕೆಯ (ಫ.ತ), ವನು ಕಯ್ಯೊಡನೆ ಮಱದ್ಯೆ ಮಾನನಿಧಿ ಕೇಳ್ ಮಱಯಲಾಗದು ನಮ್ಮ ಹೇಳಿಕೆಯ (ಟ.ದ), ವನು ಕಯ್ಯೊಡನೆ ಮಱದೆಯಿದೇನು ನಿನ್ನಯ ಮಱಯೆ ವಿಭ್ರಮಕಮ್ಮ ಹೇಳಿಕೆಗೆ (ಪ). [2] ರ (ಖ.ಫ.ಟ.ತ). [3] ವಿಪತ್ತೀನರಕಭಯವಿದು ಬಹುದಲಾ (ಕ). [4] ಜುಳ (ಖ.ಫ).

ಪಾಲಿಸುವುದಾ ಪಾಂಡುಸುತರ ಸ
ಮೇಳದಲಿ ಸೇರುವುದು ಚಿತ್ತಕೆ
ತಾಳದಿರು ರಾಜಸವಿಕಾರವನೆಂದನಾ ವಿದುರ॥ ೧೩

ತಾಯೆ ಹದುಳಿಸು ದೇವಲೋಕದ
ರಾಯದಲಿ ಸಲಿಸಾ ಕುಮಾರರ
ನಾಯುಷದ ಲಿಪಿ ಹಣೆಯಲೊರಸಿದಡಾರ ವಶವಿದಕೆ।
ರಾಯನಲಿ ಸೊಸೆಯರಿಗೆ ವಿಕ್ಕಬು
ಪಾಯತಾಕ್ಷಿಯರಿಗೆ ವಿಶೋಕದ
ದಾಯಿನವ ಕೊಡಿಸೆಂದನಾ ಮುನಿ ಸುಬಲನಂದನೆಗೆ। ೧೪

ಧರಣಿಪತಿ ಹೊಱವಂಟನಂತಃ
ಪುರವ ಬಿಸುಟರು ಭಾನುಮತಿ ಸಹಿ
ತರಸಿಯರು ಹೊಱವಂಟರೇಕಾಂಬರದ ಬಿಡುಮುಡಿಯ।
ಕರದ ಬಸುಱಿನ ಹೊಯ್ಲ ಕಜ್ಜಳ
ಪರಿಲುಳಿತ ನಯನಾಂಬುಗಳ ಕಾ
ತರಿಪ ಕಮಲಾಕ್ಷಿಯರು ನೆರೆದುದು ಲಕ್ಕ ಸಂಖ್ಯೆಯಲಿ॥ * ೧೫

ವಣಿಜನಸತಿಯರು ಶಿಲ್ಪಿಜನವುಪ
ವಣಿಜದಬಲಾಜನವಘಾಟದ
ಗಣಿಕೆಯರು ನಾನಾದಿಗಂತದ ರಾಜಪತ್ನಿಯರು।
ಹಣಿಲ ಕಬರಿಯ ಹೊಳೆವ ಮುಂದಲೆ
ವಣಿಯ ಮುಕುರ ಮುಖಾಂಬುಜದ ಪದ
ಝಣಝಣತ್ಕೃತಿ ಜಡಿಯೆ ನಡೆದುದು ಬೀದಿಬೀದಿಯಲಿ। ೧೬

ಎಸಳುಗಂಗಳ ಬೆಳಗನಶ್ರು
ಪ್ರಸರ ತಡೆದುದು ಶೋಕ[1]ಮಯಶಿಖಿ[1]
ಮುಸುಡಕಾಂತಿಯ ಕುಡಿದುದೊಸರುವ ಬಿಸಿಲ ಬೇಗೆಗಳು।
ಮಿಸುಪ ಲಾವಣ್ಯಾಂಬುವನು ಬ
ತ್ತಿಸಿದವಂಗುಲಿಯುಪಹತಿಗಳು[2][†ಕೇ
ಣಸರ][2] ಪೆಳೆದುದು ಕುಚದ ಚೆಲುವನು† ಕೋಮಲಾಂಗಿಯರ॥೧೭

* ಈ ಪದ್ಯವು (ಗ) ಪ್ರತಿಯಲ್ಲಿಲ್ಲ. [1] ವಹ್ನಿಯು (ಕ.ಖ.ತ). [2] ಕೇಣಾವಿಸರ (ಕ), ಕೈಬಿಸಜ (ಗ.ಟ.ಪ), ಕೇಣದವಿಸರ (ಘ). †–† ವರೆ ಮುಸುಕಿದುದು ಕುಚ ವೇನವೆಂದೆನು (ಖ).

ತಮ್ಮೊಳೇಕತ್ವದ ಸಖಿತ್ವದ
ಸೊಮ್ಮಿನಲಿ ಶ್ರುತಿಯುಶ್ರುಜಲವನು
ನಿರ್ಮಿಸಿದವೆನೆ ಕರ್ಣಪೂರದ ಮುತ್ತು ಸೂಸಿದವು।
ನೆಮ್ಮಿತತಿಶಯ ಶೋಕವಹ್ನಿಯು
[1]ರೊ[1]ಮ್ಮಿಗೆಯು ಕರಣಂಗಳಲಿ ನೃಪ
ಧರ್ಮಪತ್ನಿಯರಳುತ ಹೊಱವಂಟರು ಪುರಾಂತರವ॥ ೧೮

ಉಡಿದು ಬಿದ್ದವು ಸೂಡಗವು ಬಿಗು
ಹಡಗಿ ಕಳೆದವು ತೋಳ ಬಂದಿಗ
ಳೊಡನೊಡನೆ ಚೆಲ್ಲಿದವು ಮುತ್ತಿನ ಹಾರಚಯ ಹಱಿದು।
ಬಿಡುಮುಡಿಯ ಕಡುತಿಮಿರ ಕಾಱಿದು
ದುಡುಗಣವನೆನೆ ಸೂಸಕದ ಮು
ತ್ತಿಡಿಸಿ ಸುರಿದವು ನೆಲಕೆ ನೃಪವನಿತಾಕದಂಬದಲಿ॥ ೧೯

ಗಾಳಿಯಱಿಯದು ಮುನ್ನ ರವಿಕಿರ
ಣಾಳಿ ಸೋಂಕದಪೂರ್ವರೂಪಿನ
ಮೇಲೆ ಬೀಳುವವೆಂಬವೊಲು ಕಡುವಿಸಿಲು ಬಿಱುಗಾಳಿ।
ತೂಳಿದವು ತರುಣಿಯರ[2]ನಾವವ[2]
ರಾಲಿಯಱಿಯದ ನೆಲೆಯ[3]ನಾ[3] ಚಾಂ
ಡಾಲಜನಪರಿಯಂತ ಕಂಡುದು ರಾಯರಾಣಿಯರ॥ ೨೦

ಅರಸ ಚಿತ್ತೈಸವರು ಹಸ್ತಿನ
ಪುರವ ಹೊಱವಡೆ ದೂರದಲಿ ಕೃಪ
ಗುರುಜ ಕೃತವರ್ಮಕರು ಕಂಡರು ಕೌರವೇಶ್ವರನ।
ಅರಸಿಯರ ನಾನಾದಿಗಂತದ
ಧರಣಿಪರ ಭಗದತ್ತ ಮಾದ್ರೇ
ಶ್ವರ ಜಯದ್ರಥ ಕರ್ಣ ದುಶ್ಶಾಸನರ ರಾಣಿಯರ॥ ೨೧

ಗಣಿಕೆಯರನೇಕಾದಶಾಕ್ಷೋ
ಹಿಣಿಯ ನೃಪರಾಣಿಯರನಾ ಪ
ಟ್ಟಣ ಜನದ ಪರಿಜನದ ಬಹುಕಾಂತಾಕದಂಬಕವ।

---
[1] ಳು (ಖ.ಪು.ತ). [2] ನವತಾ (ಗ.ಪು.ದ). [3] ಲಾ (ಕ.ಪು).

ರಣಮಹೀ[1]ದರುಶನಕೆ[1] ಬಹು ಸಂ
ದಣಿಯು ಕಂಡರು ಧರ್ಮಸುತನಿ
ನ್ನುಣಲಿ ಧರಣಿಯನೆಂದು ಸುಯ್ದರು ಬಯ್ದು ಕಮಲಜನ॥ ೨೨

ಬಂದು ಧೃತರಾಷ್ಟ್ರಾವನೀಶನ
ಮುಂದೆ ನಿಂದರು ರಾಯಕಟಕವ
ಕೊಂದ ರಜನಿಯ ರಹವನಭಿವರ್ಣಿಸಿದರರಸಂಗೆ।
ಸಂದುದೇ ಛಲವೆನ್ನ ಮಗನೇ
ನೆಂದನೈ ಹರಿಬದಲಿ ಹರುಷವ
ತಂದಿರೈ [2]ತಮಗಿನ್ನು[2] ಲೇಸಾಯ್ತೆಂದನಂಧನೃಪ॥ ೨೩

ಪತಿಕರಿಸಿದನು ನಮ್ಮನಹಿತ
ಸ್ಥಿತಿಯನೆಲ್ಲವ ತಿಳಿದನಮರಾ
ವತಿಯ ಸತಿಯರ ಸೋಂಕಿನಲಿ ಸೇರಿದನು ನಿಮಿಷದಲಿ।
ಕ್ಷಿತಿಪನಂತ್ಯದೊಳಲ್ಲಿ ಶಸ್ತ್ರ
ಚ್ಯುತಿಯಮಾಡಿ ಪಿರಾಗದಲಿ [3]ವನ
ಗತಿಕರಾವೈ[3]ತಂದೆವೆಂದರು ಗುರುಸುತಾದಿಗಳು॥ ೨೪

ಲೇಸುಮಾಡಿದಿರಿನ್ನು ನಿಮಗಿ
ನ್ನೈಸಲೇ ಕರ್ತವ್ಯವೆನೆ ಧರ
ಣೀಶನನು ಬೀಳ್ಕೊಂಡರವರಗಲಿದರು ತಮ್ಮೊಳಗೆ।
ವ್ಯಾಸಮುನಿಯಾಶ್ರಮದ ಗಂಗಾ
ದೇಶವನು ತದ್ದ್ವಾರಕಿಯ ಸಂ
ವೇಶಿಸಿದರೈ ಗುರುಜ ಕೃಪ ಕೃತವರ್ಮರೊಲವಿನಲಿ॥ ೨೫

ತಿರುಗಿದರು ಬಳಿಕತ್ತಲೀ ಮೋ
ಹರದ ಕಾಂತಾಕೋಟಿ ಬಂದುದು
ಹರಳುಮುಳ್ಳುಗಳೊತ್ತುಗಾಲಿನ ದೂರತರಪಥರ।
ಉರಿಯ ಜಠರದ ಬಿಸಿಲ ಝಳದಲಿ
ಹುರಿದ ಕದಪುಗಳೆರಡು ಕಡೆಯಲಿ
ಸುರಿವ ನಯನಾಂಬುಗಳ ರಾಜನಿತಂಬಿನೀನಿಕರ॥ ೨೬

---

[1] ತಳಕೈದಿ (ಕ). [2] ನೀವೆಮಗೆ (ಕ), ಕುರುಪತಿಗೆ (ಖ), ರಾಯಂಗೆ (ಚ.ದ). [3] ಮನಗತಿಕರಾವೈ (ಕ), ನವಗತಿಕರಾವೈ (ಖ), ನವಗತಿಯರಾವೈ (ಘ), ನವಗತಿಯಲಾವೈ (ಚ.ದ), ನವಗತಿಗಳಾವೈ (ತ).

ಬಂದುದೀ ಗಜಪುರದ ನಾರೀ
ವೃಂದ ಧೃತರಾಷ್ಟ್ರಾವನೀಶನ
ಮುಂದೆ ವೇದವ್ಯಾಸ ಸಂಜಯ ವಿದುರ ಪೌರಜನ।
ಮುಂದಣಾಹವರಂಗಧಾರುಣಿ
ಯೊಂದು ಕೆಲದುಪವನದ ನೆಳಲಲಿ
ನಿಂದುದಿವರಾಗಮನವನು ಕೇಳಿದನು ಯಮಸೂನು॥ ೨೭

ಮುರಮಥನ ಸಾತ್ಯಕಿ ಯುಧಿಷ್ಠಿರ
ಧರಣಿಪತಿ ನರ ಭೀಮ ಮಾದ್ರೇ
ಯರುಗಳೈವರ ಸಾರಥಿಗಳು ಯುಯುತ್ಸು ದಾರುಕರು।
ತೆರಳಿತೇಳಕ್ಷೋಹಿಣಿಯ ನೃಪ
ರರಸಿಯರು ದ್ರೌಪದಿಯ ರೋದನ
ಸರದ ಗಾನದ ಜಠರತಾಡನ ತಾಳಮೇಳದಲಿ॥ ೨೮

ಇವರು ಬಂದರು ದೂರದಲಿ ಮಾ
ಧವನ ಮತದಲಿ ನಿಂದರಾಚೆಯ
ಯುವತಿಜನ ಗಾಂಧಾರಿ ಕುಂತೀ ಭಾನುಮತಿ ಸಹಿತ।
ವಿವಿಧವಿಕೃತವಿಳಾಸನಯನೋ
ದ್ಭವಪಯಸ್ತಿಮಿರಾಂಶುಕೆಯರಂ
ದವನಿಯಲಿ ಕೆಡೆದೊಱಲುತಿರ್ದರು ತಾಱು ಥಟ್ಟಿನಲಿ॥ ೨೯

ಅರಸ ಕೇಳ್ ಧೃತರಾಷ್ಟ್ರ ಸಂಜಯ
ವರಮುನಿಪ ವಿದುರಾದಿ ಪರಿಜನ
ಪುರಜನಾವಳಿಯಿದ್ದುದುಪವನದೊಂದು ಬಾಹೆಯಲಿ।
ನೆರೆದುದೀಚೆಯಲೊಂದೆಸೆಯಲು
ತ್ತರೆ ಸುಭದ್ರೆಯರಾದಿ[1] ಯಾದವ
ರರಸಿಯರು[1] ಸಹಿತೊಱಲುತಿರ್ದಳ್ ದ್ರೌಪದೀದೇವಿ॥ ೩೦

ಹರಿಸಹಿತ ಪಾಂಡವರದೊಂದೆಸೆ
ಯಿರೆ ಚತುರ್ವಿಧವಾದುದೀ ಮೋ
ಹರದೊಳಾಯ್ತಿಡೆಯಾಟ ವೇದವ್ಯಾಸ ವಿದುರರಿಗೆ।
ಧರಣಿಪನ ಕಾಣಿಸುವುದಂಥನ
ನಿರುಪಮಿತ ಶೋಕಾನಳನ ಸಂ
ಹರಿಸುವುದು ನಯವೆಂದು ವೇದವ್ಯಾಸಮುನಿ ನುಡಿದ॥ ೩೧

---

[1] ಯಾದವಿಯರು (ಕ).

ಇದಕೆ ಸಂಶಯವೇನು ಬೊಪ್ಪನ
ಪದಯುಗವ ಕಾಣಿಸುವುದೆಮ್ಮನು
ಹದುಳವಿಡುವುದು ಹಸ್ತಿನಾಪುರದರಸುತನ ತನಗೆ।
ಒದೆದು ನೂಕಿದ ಹದನ ಮಕುಟಾ
ಗ್ರದಲಿ ಧರಿಸುವೆವೆಂದು ಬಿನ್ನವಿ
ಪುದು ಮಹೀಪತಿಗೆಂದು ಮುನಿಗಱುಹಿದನು ಯಮಸೂನು॥ ೩೨

ಲೇಸನಾಡಿದೆ ಮಗನೆ ಧರ್ಮದ
ಮಿಾಸಲಲ್ಲಾ ನಿನ್ನ ಮತಿ ಬಳಿ
ಕೈಸಲೇಯೆನುತವರು ಬಂದರು ಭೂಪತಿಯ ಹೊರೆಗೆ।
ಆ ಸುಯೋಧನ ನಿನ್ನ ಮಗನ
ಲ್ಲೀ ಸಮಂಜಸ ಧರ್ಮಜನ ಹಿಡಿ
ದೀಸುವುದು ಭವಜಲನಿಧಿಯನೆಂದಮಳಮುನಿ ನುಡಿದ॥ ೩೩

ನೃಪನ ಕಾಣಿಸಿಕೊಂಬುದನಿಬರ
ನುಪಚರಿಸುವುದು ನಿನ್ನ ಮಕ್ಕಳ
ಕೃಪಣತೆಯನಾರೈವರಲ್ಲವರೈವರುತ್ತಮರು।
ಉಪಹತಿಯ ನೆನೆಯದಿರು ದುರ್ಜನ
ರಪಕೃತಿಗೆ ಫಲವಾಯ್ತು ಧರ್ಮವೆ
ರಪಣವಿಹಪರಲೋಕಕೆಲೆ ಧೃತರಾಷ್ಟ್ರ ಕೇಳೆಂದ॥ ೩೪

ಹೈಹಸಾದವು ನಿಮ್ಮ ಚಿತ್ತಕೆ
ಬೇಹ ಹದನೇ ಕಾರ್ಯಗತಿ ಸಂ
ದೇಹವೇ ಪಾಂಡುವಿನ ಮಕ್ಕಳು ಮಕ್ಕಳವರೆಮಗೆ।
ಕಾಹುರರು ಕಲ್ಮಷರು ಬಂಧು
ದ್ರೋಹಿಗಳು ಗತವಾಯ್ತು ನಿಷ್ಪ್ರ
ತ್ಯೂಹವಿನ್ನೇನವರಿಗೆಂದನು ಮುನಿಗೆ ಧೃತರಾಷ್ಟ್ರ॥ ೩೫

ಖಳನ ಹೃದಯದ ಕಾಳಕೂಟದ
ಗುಳಿಗೆಗಳನಿವರೆತ್ತ ಬಲ್ಲರು
ತಿಳುಹಿ ನುಡಿದೊಡಬಡಿಸಿದರು ನಾನಾಪ್ರಕಾರದಲಿ।

ಘಳಿಲನೀಚೆಗೆ ಬಂದು ಹದನನು
ನಳಿನನಾಭಂಗಱುಹೆ ನಸುನಗು
ತೊಳಗೊಳಗೆ ಹರಿ ವಿಶ್ವಕರ್ಮನ [1]ನೆನೆದು[1] ನೇಮಿಸಿದ। ೩೬

ನೆನೆದ ಘಳಿಗೆಯೊಳಾತ ಕಟ್ಟು
ಕ್ಕಿನಲಿ ಸರ್ವಾವಯವವನು ಸಂ
ಜನಿಸಿದನು ಪ್ರತಿರೂಪವನು ಪವಮಾನನಂದನನ।
ದನುಜರಿಪುಸಹಿತವರು ಬಂದರು
ಮುನಿಯೊಡನೆ ಬಳಿಕಂಧನೃಪತಿಗೆ
ವಿನಯದಲಿ ಮೆಯ್ಯಿಕ್ಕಿದನು ಭಕ್ತಿಯಲಿ ಯಮಸೂನು॥ ೩೭

ಬಾ ಮಗನೆ ಕುರುರಾಜವಂಶಶಿ
ರೋಮಣಿಯೆ ನಿರ್ಧೂತರಾಜಸ
ತಾಮಸನೆ ಸತ್ವೈಕನಿಧಿ ಬಾ ಕಂದ ಬಾ ಎನುತ।
ಭೂಮಿಪನ ತೆಗೆದಪ್ಪಿ ಬಹಳ
ಪ್ರೇಮದಲಿ ಮುಂಡಾಡಿದನು ಕಲಿ
ಭೀಮನೋ ಬಾ ಮಗನೆ ಬಾರೈ ಕಂದ ಬಾ ಎಂದ॥ ೩೮

ಭೀಮನನು ಹಿಂದಿಕ್ಕಿ ಲೋಹದ
ಭೀಮನನು ಮುಂದಿರಿಸಿದಡೆ ಸು
ಪ್ರೇಮನಪ್ಪಿದಡೇನನೆಂಬೆನು ಮೋಹವನು ಮಗನ।
ಆ ಮಹಾವಜ್ರಾಯತಪ್ರೋ
ದ್ದಾಮದಾಯಸಭೀಮತನು ನಿ
ರ್ನಾಮವೆನೆ ನುಗ್ಗಾಗಿ ಬಿದ್ದುದು ನೃಪನ [2]ತ[2]ಕ್ಕೆಯಲಿ॥ ೩೯

ಮಗನೆ ಹಾ ಹಾ ಭೀಮ ನೊಂದ್ಯೆ
ಮಗನೆ ಕೆಟ್ಟೆನು ಕೆಟ್ಟೆನಕಟೆಂ
ದೊಗುಮಿಗೆಯ ಶೋಕದಲಿ ನೆಱೆ ಮಱುಗಿದನು ಧೃತರಾಷ್ಟ್ರ।
ದುಗುಡ ಬೇಡೊಮ್ಮಿಂಗೆ ನಿಮ್ಮಯ
ಮಗನುಳಿದ ನಿಮ್ಮಧಿಕರೋಷದ
ಹಗರಣದ ಹಗೆ [3]ಹೋಯಿತೆಂ[3]ದನು ನಗುತ ಮುರವೈರಿ॥ ೪೦

[1] ಕರೆದು (ಖ.ಗ.ಟ.ತ). [2] ತೆ (ಫ.ತ.). [3] ಹರಿದುದೆಂ (ಕ).

ತ್ರಾಣವಿಮ್ಮಡಿಸಿತ್ತು ಕೋಪದ
ಕೇಣ[1]ವೆಚ್ಚ[1]ಸಿದಡೆ ನೃಪ ಸ
ತ್ರಾಣದಲ [2]ತನಿಬಗಿಯೆ[2] ನುಗ್ಗಾಯ್ತಾಯಸ ಪ್ರತಿಮೆ।
ಮಾಣು ಭಯವನು ಭೀಮ ಭೂಪನ
ಕಾಣು ಹೋಗೆನೆ ನಡುಗಿ ಭುವನ
ಪ್ರಾಣನಾತ್ಮಜ ಬಿದ್ದನಾ ಧೃತರಾಷ್ಟ್ರನಂಘ್ರಿಯಲಿ॥ ೪೧

ಪವನಸುತನೇ ಬಾ ಎನುತ ತ
ಕ್ಕವಿಸಿದನು ಬಳಿಕೆರಗಿದಡೆ ಪಾ
ಸವನ ಸುತ ಬಾ ಕಂದ ಎಂದಪ್ಪಿದನು ಫಲುಗುಣನ।
ತವಕದಿಂದೆರಗಿದಡೆ ಮಾದ್ರಿಯ
ಜವಳಿಮಕ್ಕಳನಪ್ಪಿದನು ಕೌ
ರವಕುಲಾಗ್ರಣಿಗಳಿರ ಕುಳ್ಳಿರಿಯೆಂದನಂಧನೃಪ॥ ೪೨

ಕುರುಮಹೀಪತಿ ನಮ್ಮಪೂರ್ವ[3]ಜ
ರ[3]ರಸು ತತ್ಸಂತಾನಪಾರಂ
ಪರೆಯನಳಿವಡೆ ಕೆಲಬರಾದರು ಹೋದರವರಿಂದು।
ಭರತಕುಲವನು ಹೊರೆದು ಮಿಗೆ ವಿ
ಸ್ತರಿಸು ಮಗನೆ ಸುಯೋಧನಾದ್ಯರ
ದುರುಳುತನದವಗುಣವನೆಮ್ಮನು ನೋಡಿ ಮಱೆಯೆಂದ॥ ೪೩

ಅವರೊಳವಗುಣವೇ [4]ಚಿರಂತ[4]ನ
ಭವದ ಕಿಲ್ಬಿಷ ಕರ್ಮಪಾಕ
ಪ್ರವರ ದುರಿಯೋಧನನ ಸವ್ಯಪದೇಶಮಾತ್ರದಲಿ।
ಎವಗೆ ರಚಿಸಿತು ರಾಜ್ಯವಿಭ್ರಂ
ಶವನು ತತ್ಸುಕೃತೋದಯಪ್ರಾ
ಭವವೆ ತಿರುಗಿಸಿತೆಂದು ನಯದಲಿ ಧರ್ಮಸುತ ನುಡಿದ॥ ೪೪

ಸಾಕಿದಂತಿರಲಬಲೆಯುರೊ[5]ಳು
ದ್ರೇಕ[5] ನಿಮ್ಮಯ ಹಿರಿಯ ತಾಯುಽ
ದ್ರೇಕವನು ಪರಿಹರಿಸು ಶೋಕಕ್ರೋಧದುಪಟಳಕೆ।

---

[1] ವಿಮ್ಮಡಿ (ತ). [2] ತನುಬಿರಿಯ (ಕ), ತನುಬಿಗಿಯೆ (ತ). [3] ದ ಆ (ಖ.ಘ.ಟ.ದ.ತ). [4] ನಿರಂತರ (ಖ.ಟ.ತ.ಪ). [5] ಅವಿವೇಕಿ (ಘ.ತ).

ಆಕೆ ಸೈರಿಸಲಱಿಯಳಱಿವಿನೊ
ಳಾಕೆವಾಳರು ತಿಳಿಹಿ ತಮ್ಮನ
ನಾಕೆಯನು ಕಾಣಿಸುವುದೆಂದನು ವ್ಯಾಸವಿದುರರಿಗೆ॥ ೪೫

ವಿದುರ ವೇದವ್ಯಾಸ ಮುನಿಯೀ
ಹದನನಱುಹುವೆವೆಂದು ರಾಯನ
ಸುದತಿಯಲ್ಲಿಗೆ ಬಂದು ನುಡಿದರು ಮಧುರವಚನದಲಿ।
ಕದಪನಂಗೈಗಿತ್ತು ತಲೆಗು
ತ್ತಿದಳು ನಯನೋದಕದ ಪರಿವಾ
ಹದಲಿ ನನೆದಳು ಮಹಿಳೆ[1]ಯಿದ್ದಳು ಬಹಳಮೋನ[1]ದಲಿ॥ ೪೬

ದುಗುಡವನು ಬಿಡು ಮೋಹಬಂಧ
ಸ್ಥಗಿತ ಚಿತ್ತದ ಕದಡು [2]ಹ[2]ಣಿಯಲಿ
ಮಗಳೆ ಮರುಳಾದೌ ವಿಳಾಸದ ವಿಹಿತವಿಹ[3]ಪರ[3]ಕೆ। (?)
ಅಗಡುಮಕ್ಕಳ ತಾಯ್ಗೆ ತಪ್ಪದು
ಬೆಗಡುಬೇಗೆ ಸುಯೋಧನಾದ್ಯರ
ವಿಗಡತನವನು ನೆನೆದು ನೀ ನೋಡೆಂದನಾ ಮುನಿಪ॥* ೪೭

ಮುನಿಯದಿರು ಗಾಂಧಾರಿ ಡಿಟ ನಿ
ನ್ನನುಜನಿಕ್ಕಿದ ಸಾರಿ ನಿನ್ನಯ
ತನುಜರನು ನಿನ್ನಖಿಳಮಿತ್ರಜ್ಞಾತಿಬಾಂಧವರ।
ಮನುಜಪತಿಗಳನಂತವನು ರಿಪು
ಜನಪ ಶರವಹ್ನಿಯಲಿ ಬೇಳದು
ದಿನಿತು ಶೋಕೋದ್ರೇಕ ನಿನಗೇಕೆಂದನಾಮುನಿಪ॥* ೪೮

ಅಳಿದವರಿಗಳಲುವುದು ಸಲ್ಲದು
ನಿಲಲಿ ಸಾಕದು ನಿಮ್ಮ ಚಿತ್ತದ
ನೆಲೆಯ ಬಯಕೆಯ ಬೆಸಸಿರೇ ಕರ್ತವ್ಯವೇ[4]ನೆಮಗೆ[4]।
ಕಳವಳಿಪ ಕುಂತೀಸುತರ [5]ಕಣು
ವಳಿಗವ[5]ಗ್ರಹವಾಗು ನಿರ್ಜರ
ರೊಳಗೆ ಮಕ್ಕಳ ಮಾನ್ಯರನು ಮಾಡೆಂದನಾ ಮುನಿಪ॥ ೪೯

---

[1] ಬಿದ್ದಳು ಬಹಳಮೌನ (ಖ), ಯದ್ದಳು ಬಹಳ ಶೋಕ (ಫ), ಯಿದ್ದಳು ಬಹಳಮೋಹ (ತ). [2] ತ (ಖ). [3] ರಣ (ಖ). * ಈ ಎರಡು ಪದ್ಯಗಳು (ಫ) ಪ್ರತಿಯಲ್ಲಿಲ್ಲ. [4] ನೆನಗೆ (ಕ), ನಿವಗೆ (ಖ), ನಿದಕೆ (ಫ), ನಿನಗೆ (ತ). [5] ಕಣುವಳಿಗನು (ಕ), ಕಣುವಳಿಗಳ (ಫ), ಕಂಗಳಿಗನು (ಚ.ದ), ಕಣುವರೆಗಳ (ತ).

ನಂಬಿಸುವುದೈವರನು ಕಾಣಿಸಿ
ಕೊಂಬುದನಿಬರ ಕರಣವೃತ್ತಿಗೆ
ತುಂಬುವುದು ತನಿಹರುಷವನು ಸೌಹಾರ್ದಶೋಭೆಯಲಿ।
[1]ಝೊಂ[1]ಬಿಸಲಿ ಕೌರವರು ನಾಕನಿ
ತಂಬಿನಿಯರಳಕವನು ಮಗಳೆ ವಿ
ಡಂಬಿಸುವ ಖಳರಭಿಮತಕೆ ಮನವೀಯಬೇಡೆಂದ॥ ೫೦

ರಾಯನನು ಕಾಣಿಸಿದಿರೇ ಪ್ರ
ಜ್ಞಾಯತಾಕ್ಷನ ತಿಳಿಹಿ ಬಂದಿರೆ
ತಾಯಿಗಳು ನಾವೈಸಲೇ ಬ[2]ಲ್ಲುಃಹುಂ[2]ಟೆ ನಮಗಿನ್ನು।
ಸಾಯೆ ಸಾವೆನು ಕುರುಕುಲಾಗ್ರಣಿ
ನೋಯೆ ನೋವೆನು [3]ತನಗೆ ದುರಭಿ[3]
ಪ್ರಾಯವುಂಟೇ ಮಾವ ಎಂದಳು ಮುನಿಗೆ ಗಾಂಧಾರಿ॥ ೫೧

ಐಸಲೇ ಗುಣಮಯುವಚೋವಿ
ನ್ಯಾಸವಿದು ಸಾರೆನುತ ಮ[illegible]ಳಿದು
ಭೂಸುರಾಗ್ರಣಿ ಬಂದು ನುಡಿದನು ಧರ್ಮನಂದನಗೆ।
ರೋಷವಹ್ನಿಯನುಪಶಮಾಂಬುವಿ
ಳಾಸದಲಿ [4]ನಿಲಿಸೇಳು[4] ನೃಪನ ಮ
ಹಾಸತಿಯ ಖತಿ ಹಿರಿದು ನಮಗೊಳಗಾಗಿ ಭಯವೆಂದ॥ ೫೨

ಹರಿ ವಿದುರ ಪಾರಾಶರಾತ್ಮಜ
ವರ ಮಹೀಪತಿ ಭೀಮ ಮಾದ್ರೇ
ಯರು ಧನಂಜಯ ಸಹಿತ ಬಂದರು ಬಹಳ ವಿನಯದಲಿ।
ಚರಣದಲಿ ಮೆಯ್ಯಿಕ್ಕಿದ[5]ರೆ[5] ನೃಪ
ವರನ ನೆಗಹಿದಳನಿಲಸುತ ಸಿತ
ತುರಗ ಮಾದ್ರೀಸುತರು ಪದಕೆಱಗಿದರು ಭೀತಿಯಲಿ॥ ೫೩

ಏಳಿರೈ ಸಾಕೇಳಿ ಮಕ್ಕಳ
ರೇಳಿರೈ ದೇಸಿಗರು ನಾವ್ ಭೂ
ಪಾಲಕರು ನೀವೀಸು ನಮ್ಮಲಿ ಭೀತಿ ನಿಮಗೇಕೆ।

---

[1] ಲಂ (ಟ.ಪ). [2] ಹುದುಂ (ಕ). [3] ಬೇರೆಮನದಭ (ಖ), ತನಗೆ ಬೇರಭ (ತ). [4] ಸಲಿಸಿಹಳು (ಕ.ಖ.ಘ). [5] ನು (ಕ.ಖ.ಘ).

ದಾಳಿಯರು ನಾವಂಧಕರು ನಿ
ಮ್ಮಾಳಿಕೆಯೊಳೇ ನಿಮ್ಮ [1]ಹಂತಿಯ[1]
ಕೂಳಿನಲಿ ಬೆಂದೊಡಲ ಹೊರೆವವರೆಂದಳಿಂದುಮುಖಿ॥ ೫೪

ತಾಯೆ ಖತಿಬೇಡಿನ್ನು ಧರಣಿಗೆ
ರಾಯನೇ ಧೃತರಾಷ್ಟ್ರನಾತನ
ದಾಯ ತಂಬುಲ ಬೀಳುಡೆಯ ಬಲದಿಂದ ಬದುಕುವೆವು।
ತಾಯೆ ನೀವಿನ್ನೆಮಗೆ ಕುಂತಿಯ
ತಾಯಿತನವಂತಿರಲಿ ಕರುಣಿಸಿ
ಕಾಯಬೇಕೆಂದರಸ ಮಗುಳೆಱಗಿದನು ಚರಣದಲಿ॥ ೫೫

ಧರ್ಮ ನಿಮ್ಮದು ಮಗನೆ ಬಱಿಯ ವಿ
ಕರ್ಮವೆಮ್ಮದು ತನ್ನ ಮಕ್ಕಳು
ದುರ್ಮತಿಗಳನ್ಯಾಯಶೀಲರಸಾಧುಸಂಗತರು।
ನಿರ್ಮಳರು ನೀವೈವರಾ ಶಿವ
[2]ಧ[2]ರ್ಮಕುಶಲರು ಲೋಕ ಮೆಚ್ಚಲು
ಧರ್ಮ ನಿಮಗಿನ್ನೆನುತ ತಲೆಗುತ್ತಿದಳು ಗಾಂಧಾರಿ॥* ೫೬

ಧರ್ಮವಾಗಲಿ ಮೇಣು ರಣದಲ
ಧರ್ಮವಾಗಲಿ ಖಾತಿಯಲಿ[3]ಪರ
ಮರ್ಮಘಾ[3]ತಕವಾಯ್ತು ಸಾಕಿನ್ನೆಂದು ಫಲವೇನು।
ನಿರ್ಮಳಾಂತಃಕರಣಕೃತಪರಿ
ಕರ್ಮವಿಳಸಿತೆ ತಾಯೆ ಸೈರಿಪು[4]
ದುಮ್ಮಳವು[4] ಬೇಡೆಂದು ಮೆಯ್ಯಿಕ್ಕಿದನು ಕಲಿಭೀಮ॥ ೫೭

ಏಳು ತಮ್ಮ ವೃಥಾ ವಿಡಂಬನ
ದಾಳಿಯಾಟವಿದೇಕೆ ಸೈರಿಸ
ಹೇಳಿದೈ ಸೈರಿಸದೆ ಮುನಿದಡೆ ನಿಮಗೆ ಕೇಡಹುದೇ।
ಕಾಳೆಗದ ಕೃತಸಮಯಸತ್ಯವ
ಪಾಲಿಸಿದವರು ನೀವಲೇ ದಿಟ
ಖೂಳರಾವೈಸಲೆ ಎನುತ ಗಜಱಿದಳು ಗಾಂಧಾರಿ॥ ೫೮

---

[1] ಹಂಗಿನ (ಖ.ಗ), ಕುಂತಿಯ (ಟ.ಪ). [2] ಕ (ಟ). * ಇಲ್ಲಿಂದ ಮುಂದೆ (ತ) ಪ್ರತಿಯಲ್ಲಿ ಪತ್ರಲೋಪವಾಗಿದೆ. [3] ಪರವರ್ಮಘಾ (ಕ), ಪರಿಧರ್ಮಪಾ (ಖ), ಪರಧರ್ಮಘಾ (ಫ). [4] ಸು ನಿರ್ಮಮತೆ (ಖ), ಸು ದುರ್ಮನವು (ಟ.ದ).

ಹೊಱಿಸುವಡೆ ದುಷ್ಕೀರ್ತಿ ನಮ್ಮಲಿ
ಹೊಱಿಗೆಯಾಯಿತು ನಾಭಿಯಿಂ ಕೆಳ
ಗೆಱಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ।
ಅಱಿಕೆಯಿಂದನ್ಯಾಯವೀ ಜಗ
ವಱಿಯೆ ನಮ್ಮದು ತಾಯೆ ನೀ ಮನ
ಮೊಱಿಯದವಧರಿಸುವಡೆ ಬಿನ್ನಹವೆಂದನಾ ಭೀಮ॥ ೨೯

ಅರಗಿನರಮನೆ ಕೊಂಡವೆಮ್ಮ ತ್ರಿ
ವರು ಸಮಿತ್ತುಗಳಾ ಸುಯೋಧನ
ವರಮಯಜಮಾನನು [1]ಜಯಾ[1]ಧ್ವರವಿಧಿಯಪೂರ್ವ[2]ವನು[2]।
ಕುರುನೃಪತಿ[3]ಯನುಭವಿಸಿದನು[3] ತ
ಚ್ಚರಿತವೇನನ್ಯಾಯಪಥವೇ
ಧುರದೊಳೆಮಗನ್ಯಾಯವೈಸಲೆ ದೈವಕೃತವೆಂದ॥ ೩೦

ಕಪಟದಲಿ ಜೂಜಾಡಿ ರಾಜ್ಯವ
ನಪಹರಿಸಿದಡೆ ಧರ್ಮ ನಿಮ್ಮದು
ಕೃಪಣತೆಯ ನಾನೇನ ಹೇಳುವೆನಾ ಸುಯೋಧನನ।
ದ್ರುಪದಪುತ್ರಿಯ ಗಾಢ ಗರುವಿಕೆ
ಗುಪಹತಿಯ ಮಾಡುವುದು ಧರ್ಮದ
ವಿಪುಳ ಪಥ ನಿಮ್ಮದು ಮಹಾಧರ್ಮಜ್ಞರಹಿರೆಂದ॥ ೩೧

ಲಲನೆ ಋತುಮತಿಯೆಂದಡೆಯು ಸಭೆ
ಗೆಳೆದು ತಂದವರಧಿಕಸಜ್ಜನ
ರಳಿಕಳಾಳಿಕೆಯುಟ್ಟ ಸೀರೆಯನೂರುಮಧ್ಯದಲಿ।
ಸುಲಿಸಿದರು ಧಾರ್ಮಿಕರು ತಾವೇ
ಖಳರು ನೀವೇ ಸುಜನರೆಮ್ಮೀ
ಸ್ಖಲಿತವನು ನೀವಿನ್ನು ಸೈರಿಸಿ ತಾಯೆ ನಮಗೆಂದ॥ ೩೨

ಕದನವಿಜಯದ ಭಂಗಿ ತಲೆಗೇ
ಱಿದುದೊ ಮೇಲಾಂಕ[4]ಣದಲೊಡವು[4]
ಟ್ಟಿದನ ನೆತ್ತರುಗುಡಿಹಿ ನಿನ್ನೊಡನೆನಗೆ ಮಾತೇನು।
ಇದಿರಲಿರದಿರು ಸಾರು ಕರೆ ಧ
ರ್ಮದ ವಿಡಂಬದ ಧರ್ಮಪುತ್ರನ
ಹದನ ಕೇಳುವೆನೆನುತ ಕಳವಳಿಸಿದಳು ಗಾಂಧಾರಿ॥ ೩೩

---

[1] ತದ (ಖ ಘ.ಟ). [2] ದಲ (ಖ.ಘ.ಟ). [3] ವಿರಚಿಸಿದನಿದು (ಖ.
[4] ದಲಯೊಡಹ. (ಟ.ದ.ಪ).

ಧರಣಿಪತಿ ಕೇಳ್ ಸುಬಲಜೆಯು ನಿ
ಷ್ಠುರದ ನುಡಿಯಲಿ ನಡುಗಿ ಭೂಪತಿ
ಕರವ ಮುಗಿದತಿವಿನಯಭರದಲಿ ಬಾಗಿ ಭೀತಿಯಲಿ।
ಕರುಣಿಸೌ ಗಾಂಧಾರಿ ನಿರ್ಮಳ
ಕುರುಕುಲಾನ್ವಯಜನನಿ ಕೋಪ
ಸ್ಫುರಣದಲಿ ಶಪಿಸೆ[1]ನಗೆ[1] ಶಾಪಾರುಹನು ತಾನೆಂದ॥ ೬೪

ಶಾಪವನು ನೀ ಹೆಸರಿಸೌ ಸ
ರ್ವಾಪರಾಧಿಗಳಾವು ನಿಮ್ಮಯ
ಕೋಪ ತಿಳಿಯಲಿ ತಾಯೆ ಫಲಿಸಲಿ ಬಂಧುವಧೆ ನಮಗೆ।
ನೀ ಪತಿವ್ರತೆ ನಿನ್ನ ಖತಿ ಜೀ
ವಾಪಹಾರವು ತಮಗೆ ನಿಮ್ಮನು
ತಾಪವಡಗಲಿ ತನ್ನ[2]ನುರು[2]ಹೆಂದೆರಗಿದನು ಪದಕೆ॥ ೬೫

ನನೆದುದಂತಃಕರಣ ಕರುಣಾ
ವಿನುತ ರಸದಲಿ ಖತಿಯ ಝಳ ಝೊ
ಮ್ಮನಲಿ ಜಡಿದುದು ಜಾಱಿತಗ್ಗದ ಪುತ್ರಶತಶೋಕ।
ಜನಪ ಕೇಳೈ ರಾಜಸದ ಸಂ
ಜನಿತ ತಾಮಸಬೀಜ[3]ಶೇಷ[3]ದ
ವನಜಮುಖಿ ನೋಡಿದಳು ನಖಪಂಕ್ತಿಗಳನವನಿಪನ॥* ೬೬

ಉರಿದವರಸನ ನಖನಿಕರ ಹೊಗೆ
ವೆರಸಿ ಕೌರಿಡಲೋಡಿ ಹೊಕ್ಕರು
ನರವೃಕೋದರರಸುರರಿಪುವಿನ ಪಕ್ಷಿ[4]ಮಾಂಗ[4]ದಲಿ।
ಹರಿಯಭಯಕರವೆತ್ತಿ ಯಮಜಾ
ದ್ಯರನು ಸಂತೈಸಿದನು ರೋಷ
ಸ್ಫುರಣವಡಗಿತು ಸುಬಲಸುತೆಗಿನ್ನಂಜಬೇಡೆಂದ॥ ೬೭

ಕೃತಕಭೀಮನ ಕೊಂಡು ಮುಳು[5]ಗಿ[5]ತು
ಕ್ಷಿತಿಪತಿಯ ರೋಷಾಗ್ನಿಯಾತನ
ಸತಿಯು ಖತಿ ಮಗ್ಗಿತು ಮಹೀಶನ ನಖ[6]ಮರೀಚಿ[6]ಯಲಿ।
ಜಿತವಿರೋಧವ್ಯಾಪ್ತಿ ಬಹಳ
ವ್ಯತಿಕರದೊಳಾಯ್ತೆಂದು ಲಕ್ಷ್ಮೀ
ಪತಿ ನರೇಂದ್ರನ ಸಂತವಿಟ್ಟನು ಸಾರವಚನದಲಿ॥† ೬೮

---

[1] ನ್ನ (ಕ.ಟ.ದ). [2] ನ.ಳು (ಖ). * ಈ ಪದ್ಯ (ಫ) ಪ್ರತಿಯಲ್ಲಿಲ್ಲ. [3] ತೇಜ (ಖ.ಟ). [4] ಮಾಗ್ರ (ಕ). [5] ಕಿ (ಕ). [6] ದಕಾಂತಿ (ಕ.ಟ.ದ). † ಈ ಪದ್ಯವಾದಮೇಲೆ (ಗ.ಟ.ಪ) ಪ್ರತಿಗಳಲ್ಲಿ ಮುಂದಿನೆರಡು ಪದ್ಯಗಳು ಹೆಚ್ಚಾಗಿವೆ.—

ಭೀತಿ ಬೇಡೆಲೆ ಮಕ್ಕಳಿರ ನಿ
ರ್ಧೂತಧರ್ಮಸ್ಥಿತಿಗಳನ್ವಯ
ಘಾತಕರು ತಮ್ಮಿಂದ ತಾವಳಿದರು ರಣಾಗ್ರದಲಿ।
[1]ನೀ[1]ತಿಯಲಿ ನೀವಿನ್ನು ಪಾಲಿಸಿ
ಭೂತಳವ[2]ನು[2]ಬೆ ಕಳದ ಬಂಧು
ವ್ರಾತಕುದಕವನೀವುದೆಂದಳು ನೃಪಗೆ ಗಾಂಧಾರಿ॥ ೬೯

ಅನುನಯವ ರಚಿಸಿದಳು ಕೌರವ
ಜನನಿ ಲೇಸಾಯ್ತೆನುತ ಬಂದರು
ವಿನಯದಲಿ ಮೆಯ್ಯಿಕ್ಕಿದರು ನಿಜಮಾತೆಯಂಘ್ರಿಯಲಿ।
ನನೆದಳಕ್ಷಿಪಯಃಪ್ರವಾಹದೊ
ಳನಿಬರನು ತೆಗೆದಪ್ಪಿ ಕುಂತೀ
ವನಿತೆ ಸಂತೈಸಿದಳು ನಯದಲಿ ತನ್ನ ನಂದನರ॥ ೭೦

ಏಳು ಧರ್ಮಜ ಪುತ್ರಶೋಕ
ವ್ಯಾಳವಿಷಮೂರ್ಛಿತೆಯಲಾ ಪಾಂ
ಚಾಲಸುತೆಯನು ತಿಳುಹಿ ಕಾಣಿಸು ಸುಬಲನಂದನೆಯ।
ದಾಲೆಯರನಾ ಭಾನುಮತಿಯ ಧ
ಡಾಳ ದುಃಖವನಪಹರಿಸು ಪ[3]ಡಿ[3]
ತಾಳ ಬೇಡೆನೆ ಬಂದರನಿಬರು ದ್ರೌಪದಿಯ ಹೊರೆಗೆ॥ ೭೧

---

ಲೇಸ ಮಾಡಿದೆ ಮಗಳೆ ಯಮಸುತ
ನೀಸ ಸೈರಿಸಲಾಪನೇ ನಿನ
ಗೀಸತಿಳುಹಲು ಕಡೆಗೆ ತಾಮಸಬುದ್ಧಿ ಮಿಗಿಲಾಯ್ತು।
ಆ ಸುಯೋಧನ ನಿನ್ನ ಮಗನೆಂ
ಬಾಸೆ ಬಿದ್ದುದು ದ್ವೇಷಧರ್ಮದ
ವಾಸಿಗೋಸುಗ ನೀಗಿದೆಯಲಾಯೆಂದನಾ ಮುನಿಪ॥

ಎಲೆ ಮುರಾಂತಕ ಗೋತ್ರಕಲಹವ
ಬೆಳಸಿ ಕೊಲಿಸಿದೆ ನನ್ನ ಮಕ್ಕಳ
ಕುಲವಧುಗಳಷ್ಟಾದಶಾಕ್ಷೋಹಿಣಿಯ ನಾಯಕರ।
ಲಲನೆಯರ ಕಡುಶೋಕ ನಿನ್ನಯ
ಕುಲವನೀ ವಿಧಿ ಬರಿಸಲೆಂದತಿ
ಮುಳಿದು ಶಾಪವ ಕೊಟ್ಟಳಾ ಗಾಂಧಾರಿ ಮುರಹರಗೆ॥

[1] ಖ್ಯಾ (ಖ.ಘ.ಟ.ಪ). [2] ನೆ (ಕ.ಘ.ಖ). [3] ರ (ಘ.ಟ.ದ).

ಕರೆದು ತಂದರು ವಿಗತಲೋಚನ
ನರಸಿಯನು ಕಾಣಿಸಿದರತ್ತೆಯ
ಚರಣಯುಗಳದೊಳೆಱಗೆ ಹಿಡಿದೆತ್ತಿದಳು ಗಾಂಧಾರಿ।
ಮರುಳು ಮಗಳೆ ಕುಮಾರ ವರ್ಗದ
ಮರಣ ಸೊಸೆಯತ್ತೆಯರಿಗೊಂದೇ
ಪರಿ ವೃಥಾ ವ್ಯಥೆಯೇಕೆನುತ ಸಂತೈಸಿದಳು ಸತಿಯ॥ ೭೨

ಸರಿಯು[1]ಲ್ಲ[1] ಸುತಶೋಕ ನಮ್ಮಿ
ಬ್ಬರಿಗೆ ನಮ್ಮೊಳು[2]ವೆರಸಿ[2] ವೈರೋ
ತ್ಕರವಿಸಂಸ್ಥುಳರಣವಿಧಾನವ ನಮ್ಮೊಳಗೆ ರಚಿಸಿ।
ಎರಡು ಬಲದಲಿ ಸಕಲ ಭೂಮೀ
ಶ್ವರರ ಚಾತುರ್ಬಲವನುಪಸಂ
ಹರಿಸಿದಾತನು ತಾನೆ ಗದುಗಿನ ವೀರನಾರಯಣ॥ ೭೩

ಹನ್ನೊಂದನೆಯ ಸಂಧಿ ಮುಗಿದುದು.

---

[1] ಲಾ (ಘ). [2] ಬೇರೆ (ಘ), ಬೆರಸಿ (ಚ,ದ).

# ಹನ್ನೆರಡನೆಯ ಸಂಧಿ

---

ಸೂಚನೆ॥ ರಣವ ಶೋಧಿಸಲೆಂದು ಕಳನೊಳು
ಹೆಣನ ತುಳಿತುಳಿದಱಿಸ ಕುರುಧಾ
ರುಣಿಯ ಪತಿಯನು ಕಂಡು ನೆಱೆ ಮಱುಗಿದಳು ಗಾಂಧಾರಿ॥

ಕೇಳು ಜನಮೇಜಯ ಧರಿತ್ರೀ
ಪಾಲ ಕೃಷ್ಣನ ಕರೆದು ನಯದಲಿ
ಲೋಲಲೋಚನೆ ನುಡಿದಳಂತಸ್ತಾಪ ಶಿಖಿ ಜಡಿಯೆ।
ಏಳು ತಂದೆ ಮುಕುಂದ ಕದನ
ವ್ಯಾಳವಿಷ[1]ನಿರ್ದಗ್ಧ[1]ಧರಣೀ
ಪಾಲವರ್ಗವ ತೋಱಿಸೆಂದಳು ತರಳೆ ಕೈಮುಗಿದು॥ ೧

ನಿನ್ನ ಲೀಲೆಯ ಬೆಳೆಸಿರಿಯ ಸಂ
ಪನ್ನ ಮಾ[2]ಯಾ[2]ರಚನೆಯಿದು ನಿ
ರ್ಭಿನ್ನಬಾರತ[3]ನಿಚಿ[3]ತ ಬಹಳಾಕ್ಷೋಹಿಣೀ ದಳವ।
ತನ್ನೊ[4]ಡನೆ[4] ಹಗೆಬೆಳೆದ ಶೌರ್ಯವಿ
ಪನ್ನರನು ತೋಱೈ ಜನಾರ್ದನ
ಮನ್ನಿಸೆಂದಳು ನಯನಜಲವನು ಮಿಡಿದು ಗಾಂಧಾರಿ॥ ೨

ತಾಯೆ ಬಾ ಗಾಂಧಾರಿ ಮನದಲಿ
ನೋಯದಿರು ಪೌರಾಣಜನ್ಮದ
ದಾಯಭಾಗದ ಭೋಗ ಭಂಗಿಸಲಳುಕಲೇಕಿನ್ನು।
ಸಾಯಲಾಗದೆ ಸುಭಟರಸುಗಳು
ಬೀಯವೇ ಬ್ರಹ್ಮಾದಿಗಳಿಗಿದು
[5]ದಾಯವೀ[5] ಸಂಸಾರವೆಂದನು ನಗುತ ಮುರವೈರಿ॥ ೩

---

[1] ದಲಮಡಿದ (ಖ). [2] ಯೆಯ (ಕ.ಟ.ದ). [3] ವಿಜಿ (ಕ), ವಿಹಿ (ಖ), ರಚಿ (ಟ.ದ). [4] ಳಗ (ಕ). [5] ವಾಯಲೀ (ಕ), ದಾಯತಾ .(ಖ).

ಎಂದು ಕೈಗೊಟ್ಟಬಲೆಯನು ಹರಿ
ತಂದನಾ ಸಂಗ್ರಾಮಭೂಮಿಗೆ
ಹಿಂದೆ ಬರಲಷ್ಟಾದಶಾಕ್ಷೋಹಿಣಿಯ ನಾರಿಯರು ।
ಮುಂದೆ ಹೆಣದಿ[1]ನಿ[1]ಹಿಗಳು ಖಗಮೃಗ
ವೃಂದ ಚಲ್ಲಿತು ಭೂತ [2]ಪೂತನಿ[2]
ವೃಂದ ಕೆದಱಿತು ಹೊಕ್ಕರಿವರದ್ಭುತರಣಾಂಗಣವ ॥ ೪

ಸೂಸಿತಬಲಾವೃಂದ ಕೆದಱಿದ
ಕೇಶಪಾಶದ ತೆಳುವಸುಱ ನಿ
ಟ್ಟುಸುರದ ಹೊಯ್ಲುಗಳ ಲೋಚನವಾರಿಧಾರೆಗಳ ।
ಆಸುರಾಕ್ರಂದನದ ಶೋ[3]ಕಾ
ವೇಶ[3] ಬಹಳದ ಬಾಲೆಯರು ಪ್ರಾ
ಣೇಶ ಮೈದೋಱೆನುತ ಹೊಕ್ಕಱಸಿದರು ಕಳನೊಳಗೆ ॥ ೫

ಹರಿದರಗಲಕೆ ನಾರಿಯರು ಕುರು
ಧರಣಿಯಲಿ ತಂತಮ್ಮ ಪತಿಗಳ
ಕರಿಗಳಲಿ ತುರಗದಲಿ ರಥದಲಿ ಕಂಡರಲ್ಲಲ್ಲಿ ।
ಶಿರವ ಮುಂಡಾಡಿದರು ಹೆಣನಲಿ
ಹೊರಳಿದರು ವಿವಿಧ ಪ್ರಲಾಪದ
ಪ[4]ರಿ[4]ಠವವನೆಂತಱಿದರೋ ವರ್ಣಿಸುವಡರಿದೆಂದ ॥ ೬

ನಡೆದಳಾ ಗಾಂಧಾರಿ ಶೋಕದ
ಕಡಲೊಳೇಳುತ ಮುಳುಗುತಂಘ್ರಿಯು
ಕೊಡಹುತರುಣಾಂಬುಗಳ ಹೊನಲಿನ ಜಾನು[5]ದಘ್ನಗಳ[5] ।
ಅಡಗಿನಲಿ ಕಾಲೂಱ [6]ಸಿಲುಕಿದ
ಡೊ[6]ಡನೆ ಹರಿ ನೆಗಹುವನು ನರವಿನ
ತೊಡಕ ಬಿಡಿಸುತ ಹೊಕ್ಕಳಂಗನೆ ಹೆಣನ ಮಧ್ಯದಲಿ ॥ ೭

ಇತ್ತ ನೋಡೈ ದೇವಕೀಸುತ
ಮತ್ತಗಜ ಕಂಧರದೊಳಾ ಭಗ
ದತ್ತನನು ಕಂಡಾತನರಸಿಯರೈದೆ ಮೊಗವೆತ್ತಿ ।

[1] ನು (ಪ.ಕ.) [2] ಘಾತುಕ (ಕ ಟ.ದ). [3] ಕಾಕ್ಲೇಶ (ಕ), ಕಕ್ರಾನ (ಪ), ಕಾವಾಸ (ಟ.ದ). [4] ರು (ಟ.ದ). [5] ಜಂಘೆಯಲಿ (ಖ.ಗ.ಪ.ಟ). [6] ಡಾಂದರೊ (ಖ ಗ.ಪ).

ಸುತ್ತ ಬರುತ್ತೈ[1]ದಾ[1]ರೆ ದಂತಿಯು
ಹತ್ತಲಱಿಯದೆ ನೂಱುಮಡಿ ಶೋ
ಕೋತ್ತರದಲದೆ ಶಿವ ಎನುತ ಮಱುಗಿದಳು ಗಾಂಧಾರಿ। ೮

ದೇವ ನೋಡಾ ಶೋಕವಹ್ನಿಯ
ಡಾವರವ ಕಾಂಭೋಜನರಸಿಯ
ರಾವ ನೋಂಪಿಯ ನೋಂತರೋ ಶಿವಶಿವ ಮಹಾದೇವ।
ಆವನಾತನು ನಿಮ್ಮವರುಗಳ
ಮಾವನೇ ಪಾಂಚಾಲ ಸತಿಯರು
ಜೀವದಲಿ ಜಾಱಿದರು ರಮಣರ ಮೇಲೆ ತನಿಹೊರಳಿ॥ ೯

ಅದೆ ವಿರಾಟನ ಸತಿಯ [2]ರೀ[2]ಚೆಯು
ಲದೆ ಘಟೋತ್ಕಚನಂಗನೆಯರಾ
ಸುದತಿಯರ ಶೋಕವ ನಿರೀಕ್ಷಿಸು ಪಂಚ[3]ಕೇ[3]ಕೆಯರ।
ಒದಱಿ ಪಾಂಡ್ಯನ ಹೆಂಡಿ[4]ರಾ[4]ಚೆಯು
ಲದೆ ಸುಸೋಮಕ ಸೃಂಜಯಾದ್ಯರ
ವಧುಗಳೊಱಲುತ್ತದೆ ಮುರಾಂತಕ ನಿಮ್ಮ [5]ಸೇನೆ[5]ಯಲಿ॥ ೧೦

ಸುಖಿ ಕಣಾ ಭೂರಿಶ್ರವನ [6]ವರ
ಸ[6]ಖಿಯುರದೆ ಪಾಡಳಿದು ನಿಮ್ಮಯ
ಸಖನ ಗೆಲಿಸಿದಿರಿವನ ಮುಱಿದಿರಿ [7]ರಾಧೆಯಾತ್ಮಜನ[7]।
ನಿಖಿಳ ಯಾಚಕಜನ ಸಹಿತ ತ
ತ್ಸಖಿಯುರಳುತದೆ ಕರ್ಣ ಮರಣದೊ
ಳಖಿಳಜ[8]ಗ[8] ನೀನೊಬ್ಬ ತಪ್ಪಿಸಿ ಮಱುಗಿತಿಂದಿನಲಿ॥ ೧೧

ಭಾನುದತ್ತನ ಮೇಲೆ ಹೊರಳುವ
ಮಾನಿನಿಯುರ ನಿರೀಕ್ಷಿಸೈ ಮ
ತ್ಸೂನುಗಳ ನೋಡಿತ್ತಲಿದೆ ದುಶ್ಯಾಸನಾದಿಗ[9]ಳ[9]।
ಏನನೆಂಬೆನು ತನ್ನ ಸೊಸೆಯರ
ಹಾನಿಯುನು ಮಾದ್ರೇಶನರಸಿಯ
ರೇನಧರ್ಮವ ನೆನೆದರೆಂದಳಲಿದಳು ಗಾಂಧಾರಿ॥ ೧೨

---

[1] ಥ (ಕ), ಥಾ (ಫ). [2] ರಾ (ಕ). [3] ಕೈ (ಕ.ಫ.ಟ.ದ). [4] ರೀ (ಕ). [5] ಸೀಮೆ (ಖ.ಫ). [6] ನವಸ (ಕ), ತತ್ಸಖಿ (ಫ). [7] ಭಾನುನಂದನನ ಖ). ಕುಲವವೆಚ್ಚರಿಸಿ (ಫ.) [8] ನ (ಕ). [9] ಳು (ಖ).

ತಂದೆ ನೋಡೈ ಕೃಷ್ಣ ತನ್ನಯ
ನಂದನರು ನೂರ್ವರಿಗೆ ಕಿಱಿಯಳ
ನಿಂದುಮುಖಿ ದುಶ್ಶಳೆಯನಾ ಸೈಂಧವನ ವಲ್ಲಭೆಯ ।
ಅಂದು ವಿವಿಧವ್ಯೂಹ[1]ದಲಿ ಗುರು[1]
ನಿಂದಡೆಯು ಹುಸಿರಾತ್ರಿಯಲಿ ನೀ
ಕೊಂದಲೈ ತನ್ನಳಿಯನನು ವರ ಸಿಂಧುಭೂಪತಿಯ ॥ ೧೩

ಕ್ಷೇಮಧೂ[2]ರ್ತಿಯ[2]ನಾ ಕಳಿಂಗನ
ಸೋಮದತ್ತನ ಚಿತ್ರಸೇನನ
ಭೀಮವೈರಿಯಲಂ[3]ಬುಸ[3]ನ [4]ಕಿ[4]ರ್ಮ್ಮಾರನಂದನನ ।
ಭೌಮಸುತನ ಸುಶರ್ಮಕನ [5]ಸು
ತ್ರಾ[5]ಮರಿಪುಗಳ ಧೂರಿಬಲದ ಸ
ನಾಮರರಸಿಯರದೆ ನಿಜೇಶನ ಮೇಲೆ ತನಿಹೊರಳಿ ॥ ೧೪

ಎನುತ ಬರೆಬರೆ ಮುಂದೆ ಕಂಡಳು
ತನುಜನನು ಭೀಮನ ಗದಾಘ
ಟ್ಟನದ ಘಾಯದ ಮೆಯ್ಯ ಖಂಡಿಸಿದೂರುಮಂಡಲದ ।
ನನೆದ ಹುಡಿಮುಗ್ಗುಲಿನ ರಕುತದ
ಹೊನಲ ಹೊಲಸಿದ ಘೂಕಕಾಕ
ಧ್ವನಿ ಭಯಂಕರ [6]ಸನ್ನಿ[6]ಧಾನದ ಕೌರವೇಶ್ವರನ ॥ ೧೫

ಇತ್ತ ನೋಡೈ ಕೃಷ್ಣ ತನ್ನಯ
ಮತ್ತದಂತಿಯನಿಂದುಕುಲರಾ
ಜೋತ್ತಮನನೇಕಾದಶಾಕ್ಷೋಹಿಣಿಯ ವಲ್ಲಭನ ।
ಹತ್ತೆ ಹಿಡಿದೋಲಗಿಸುವರು ವರ
ಮತ್ತಕಾಶಿನಿಯರುಗಳೀಗಳು
ಸುತ್ತಮುತ್ತಿತು ಘೂಕ ವಾಯಸ ಜಂಬುಕವ್ರಾತ ॥ ೧೬

ಎನುತ ಬಿದ್ದಳು ಮೂರ್ಛೆಯಲಿ ಮಾ
ನಿನಿಯನೆತ್ತಿದನಸುರರಿಪು ನೃಪ
ವನಿತೆಯರು ಭಾನುಮತಿ ಮೊದಲಾದಖಿಳ ರಾಣಿಯರು ।

---

[1] ದಡಿಗುಡಿ (ಘ). [2] ರ್ತನ (ಕ). [3] ಬುಶ (ಕ), ಬಶ (ಘ). [4] ಕೆ (ಖ,ಘ). [5] ಸಂಗ್ರಾ (ಕ). [6] ಸಂವಿ (ಘ,ಟ,ದ,ಪ).

ಜನಪತಿಯು ಮುಕ್ಕುಱುಕಿದರು ತ
ಜ್ಜನಿತ ಶೋಕಾದ್ಭುತದ ಹಾ ಹಾ
ಧ್ವನಿಯ ಥಟ್ಟಣೆ ಘಟ್ಟಿಸಿತು ಬ್ರಹ್ಮಾಂಡಮಂಡಲವ॥ ೧೭

ಜನಪ ಕೇಳೀಚೆಯಲಿ ಕುಂತೀ
ವನಿತೆ ಕರ್ಣನ ಮೇಲೆ ಹೊರಳಿದ
ಳಿನತನುಜ ಹಾ ಕರ್ಣ ಹಾ ಹಾ ಕರ್ಣ ಹಾಯೆನುತ।
ನಿನಗೆ ಧರ್ಮಸುತಾದಿ ಭೂಮಿಪ
ರನುಜರ್ಕೈ ಮಾಯಾವಿ ಮಧುಸೂ
ದನನೆ ಮಱ[1]ಯಿಸಿ[1] ಕೊಂದನಕಟೆಂದೊಱಲಿದಳು ಕುಂತಿ॥ ೧೮

ಅಱಿದನಂತಕಸೂನು ಮುರಹರ
ನಿಱಿದ[2]ನೇ[2] ನಾ[3]ವಿನ್ನು[3] ಕರ್ಣಗೆ
ಕಿಱಿಯರ್ಕೈ ಲೇಸಾಯ್ತು ಗುರುಜನ ಬಂಧುಜನಹನನ।
ಉಱುವ ಶಶಿವಂಶದ ಮಹಾನೃಪ
ರೆಱಗಿದರೆ ಪಾತಕಕೆ ಮುನ್ನೆ
ಚ್ಚಱಿಸದಕಟಾ ತಾ[4]ಯಿ[4] ಕೆಡಿಸಿದಳೆಂದು ಬಿಸುಸುಯ್ದ॥ ೧೯

ಹೋಗಲಿನ್ನಾ ಕ್ಷತ್ರಧರ್ಮ
ತ್ಯಾಗ ದುರ್ವ್ಯಸನಪ್ರ[5]ಪಂಚ[5]ವ
ನೀಗಿ ಕಳೆಯೆಂದಸುರರಿಪುವೈತಂದು [6]ಮನ್ನಿ[6]ಸಿದ।
ಮೇಗಿವರ ಸಂಸ್ಕಾರಕಾರ್ಯನಿ
ಯೋಗವಿವೆ ಭಾರಂಕ ನಿನಗೆ ಸ
ರಾಗದಲಿ ಸಂ[7]ತೈಸಿಯೆಂ[7]ದನು ಭೂಪತಿಗೆ ಶೌರಿ॥ ೨೦

ವ್ಯಾಸ ನಾರದ ವಿದುರ ಸಾತ್ಯಕಿ
ಕೇಶವನು ದಾರುಕ ಯುಯುತ್ಸು ಮ
ಹೀಶ ಮೊದಲಾದನಿಬರರಸರ ಸಾರಥಿವ್ರಾತ।
ಆ ಸಚಿವರಾ ಹಸ್ತಿನಾಪುರ
ದಾ ಸಮಸ್ತ ಪ್ರಕೃತಿಜನ ಸಂ
ತೈಸಿದರು ಸಂಸ್ಕಾರವಿಧಿಯನು ಹತಮಹೀಶರಿಗೆ॥ ೨೧

---

1 ಸಿಯೆ (ಘ). 2 ನ್ಕೈ (ಕ). 3 ವಿಂದು (ಖ), ವೆಲ್ಲ (ಘ). 4 ನ (ಕ), ಯೊ (ಖ). 5 ಬಂಧ (ಕ.ಖ) 6 ಮಂತ್ರಿ (ಖ.ಟ.ಪ). 7 ವರಿಸಿಯೆಂ (ಕ), ತವಿಪುದೆಂ (ಖ.ಗ).

ಕುರುಪತಿಯು ರವಿಸುತನ ಮಾದ್ರೇ
ಶ್ವರನ ದುಶ್ಶಾಸನ ವಿಕರ್ಣಾ
ದ್ಯರ ಜಯದ್ರಥ ಬಾಹ್ಲಿಕರ ಭಗದತ್ತ ಲಕ್ಷಣರ।
ಗುರು[1]ವರನ[1] ಪಾಂಚಾಲ ಮತ್ಸ್ಯೇ
ಶ್ವರರ ಕುಂತೀಭೋಜನೃಪಮು
ಖ್ಯರನು ವಿಧಿಪೂರ್ವಕದಿ ದಹಿಸಿದರಾಹಿತಾಗ್ನಿಯಲಿ॥ ೨೨

ಕಳನ ಚೌಕದ ಸುತ್ತಲೊಟ್ಟಿಸಿ
ತಳಿಗಳನು ಬಹಳಾಗ್ನಿಯನು ಕೈ
ಕೊಳಿಸಿದರು ದಹಿಸಿದರು ಬಹಳಾಕ್ಷೋಹಿಣೀಭಟರ।
ಬಳಿಕ ಹಸ್ತಿನಪುರದ ಸೀಮಾ
ಸ್ಥಳಕೆ ಬಂದರು ನಿಖಿಳ ಕಾಂತಾ
ವಳಿಸಹಿತ ಗಂಗಾವಗಹನವ ಮಾಡಿದನು ನೃಪತಿ॥ ೨೩

ಆ ನದಿಯ ತೀರದಲಿ ತಿಂಗಳು
ಮಾನನಿಧಿ ತತ್ಪ್ರೇತರಿಗೆ ಜಲ
ದಾನ ವಿಧಿವಿಹಿತಪ್ರಪಂಚಿತ ಸಕಲ [2]ಸಂಸ್ಕೃ[2]ತಿಯ।
ಭೂನುತನು ಮಾಡಿದನು ಬಂದುದು
ಜಾನಪದಜನವೈದೆ ಕುಂತೀ
ಸೂನುವನು ದರುಶನವ ಮಾಡಿತು ಕಾಣಿಕೆಯ ನೀಡಿ॥ ೨೪

ತಿಳುಹಿ ರಾಯನ ಹೃದಯನೆಂಚಿತ
ಕಲುಷವನು ಖಂಡಿಸಿ ಗತಾಕ್ಷನ
ಬಲಿದ ಚಿತ್ತವ್ಯಥೆಯನಾಱಿಸಿ ನೃಪವಧೂಜನದ।
ಅಳಲನಾಱಿಸಿ ಗಜಪುರದ ನೃಪ
ನಿಳಯವನು [3]ಹೊ[3]ಗಿಸಿದನು ಯದುಕುಲ
ತಿಲಕ ಗದುಗಿನ ವೀರನಾರಾಯಣನು ಪಾಂಡವರ॥ ೨೫

ಹನ್ನೆರಡನೆಯ ಸಂಧಿ ಮುಗಿದುದು.

---

[1] ವರನು (ಕ), ವನಾ (ಖ), ಗಳನು (ಚ.ಪ). [2] ಸತ್ಕೃ (ಕ.ಖ).
[3] ಹು (ಖ).

# ಹದಿಮೂರನೆಯ ಸಂಧಿ

ಸೂಚನೆ॥ ದೇವಸಂತತಿ ನಲಿಯೆ ಪಾಂಡವ
ಜೀವಿ ಹರಿಯೆಂಬೀ ಪ್ರತಿಜ್ಞೆಯ
[1]ಭಾವ[1] ಸಂದುದು ಧರ್ಮಜನ ಪಟ್ಟಾಭಿಷೇಕದಲಿ॥

ಕೇಳು ಜನಮೇಜಯ ಧರಿತ್ರೀ
ಪಾಲ ಹಿಮಗಿರಿ ತೊಡಗಿ ಸಾಗರ
ವೇ[2]ಲೆ[2] ಪರಿಯಂತಖಿಳ ನಗರ ಗ್ರಾಮ ಪುರವರದ।
ಮೇಲುವರ್ಣಪ್ರಮುಖ[3]ವಾ[3]ಚಾಂ
ಡಾಲ[4]ರವಧಿ[4] ಸಮಸ್ತ ಭೂಜನ
ಜಾಲ ಹಸ್ತಿನಪುರಿಗೆ ಬಂದುದು ಕಂಡುದವನಿಪನ॥ ೧

ಚ್ಯವನ ಮುದ್ಗಲ ಕಣ್ವ [5]ಕಠ[5] ಭಾ
ರ್ಗವ ಭರದ್ವಾಜಾಂಗಿರಸ ಗಾ
ಲವ [6]ಪುಲಸ್ತ್ಯ ರುಮಣ್ವ ಗೌತಮ ಯಾಜ್ಞವಲ್ಕ್ಯಮುನಿ[6]।
ಧ್ರುವ ವಿಭಾಂಡಕ ಗಾರ್ಗ್ಯ ಘಟಸಂ
ಭವ ಮೃಕಂಡುಸುತಾದಿ ಭೂಮಿ
ಪ್ರವರ ಮುನಿಗಳು ಬಂದು ಕಂಡರು ಧರ್ಮನಂದನನ॥* ೨

ಜಲಧಿ ಮಧ್ಯದ ಕುಱುವ [7]ಘಟ್ಟಾ
ವಳಿಯ[7] ಕೊಳ್ಳದ ಕುಹರ ಕುಂಜದ
ನೆಲೆಯ ಗಿರಿಸಾನುಗಳ ಶಿಖರದ ದುರ್ಗವೀಥಿಗಳ।
ನೆಲನಶೇಷಪ್ರಜೆ ನಿಖಿಳ ಮಂ
ಡಳಿಕ ಮನ್ನೆಯ [8]ವಂದಿ[8]ಜನ ಸಂ
ಕುಲ ಮತಂಗಜಪುರಿಗೆ ಬಂದುದು ನೃಪನ ಕಾಣಿಕೆಗೆ ॥ † ೩

---

[1] ಠಾವು (ಖ.ಘ.ಟ.ದ.ಪ). [2] ಳೆ (ಕ). ಳು (ಘ). [3] ರಾ (ಖ.ಟ.ದ). [4] ಸುದತಿ (ಕ), ರಾದಿ (ಖ.ಘ.ಪ). [5] ವರ (ಖ), ಮುನಿ (ಘ) * ಇಲ್ಲಿಗೆ (ಘ) ಪ್ರತಿ ನಿಂತು ಹೋಗಿದೆ. [6] ಗೌತಮ ಪುಲಸ್ತ್ಯ ಸುನಸ್ತ್ಯ ರುತ್ವಿರ್ಮಿಕರು ವಾಲ್ಮೀಕಿ (ಕ), ನು ಕಶ್ಯಪನತ್ರಿ ಯಾಜ್ಞವಲ್ಕ್ಯ ಶಾಕ್ಯಮುನಿ (ಖ). [7] ದಷ್ಟಾವಳಿಯ (ಕ). [8] ರನ್ನ (ಕ). † ಈ ಪದ್ಯ (ಖ) ಪ್ರತಿಯಲ್ಲಿಲ್ಲ.

ವ್ಯಾಸ ನಾರದ ಕೃಷ್ಣ ಮೊದಲಾ
ದೀ ಸಮಸ್ತ ಮುನೀಂದ್ರನಿಕರ ಮ
ಹೀಶನನು ಪಟ್ಟಾಭಿಷೇಕಕೆ ಮನವನೊಡಬಡಿಸಿ।
ದೋಷರಹಿತ ಮುಹೂರ್ತ ಲಗ್ನ ದಿ
ನೇಶವಾರ ಶುಭಗ್ರಹೋದಯ
[1]ಲೇಸೆನಲು[1] ನೋಡಿದರು ಮಿಗೆ ಗಾರ್ಗ್ಯಾದಿ ಜೋಯಿಸರು*। ೪

ತರಿಸಿ ಮಂಗಳ ವಸ್ತುಗಳ ಸಂ
[2]ವ[2]ರಿಸಿ ಬಹುವಿಧವಾದ್ಯರವ ವಿ
ಸ್ತರದ ಪಂಚಮಹಾನಿನಾದದ ಸರ್ವಜನಮನದ।
ಹರುಷಪೂರದ ವೇದಮಂತ್ರೋ
ಚ್ಚರಣಸಾರದ ನೃಪನ ಪಟ್ಟಾ
ಧ್ವರವೆಸೆಯಲುತ್ಸವವ[3]ನೆಸಗಿದನಸುರರಿಪುವಂದು[3]॥ ೫

ಆದುದಾ ಪಟ್ಟಾಭಿಷೇಕದೊ
ಳಾ ದುರಾತ್ಮಕ [4]ಬಾಷ್ಕಳನ[4] ಪರಿ
ವಾದವನು ಮುನಿನಿಕರ ಕೇಳಿದು ಖತಿಯ ಭಾರದಲಿ।
ಭೇದಿಸಿದರವನಪುರನೆಂದು ವಿ
[5]ಷಾ[5]ದವಹ್ನಿಯಲುರುಹಿದರು ಬಳಿ
ಕಾದರಿಸಿ ಧರ್ಮಜನ ಸಂತೈಸಿದನು ಮುರವೈರಿ॥ ೬

ಅರಸ ಕೇಳೈ ಪಟ್ಟವದು ಹಿರಿ
ಯರಸನದು ಯುವರಾಜಪಟ್ಟವೆ
ಹರಿತನೂಜನೊಳಾಯ್ತು ಸೇನಾಪತಿ ಧನಂಜಯನು।
ವರ ಕುಮಾರರು ಯಮಳರಲ್ಲಿಗೆ
ಹಿರಿಯಸಚಿವನು ವಿದುರನವನಿಪ
ಪರುಠವಿಸಿದ ಯುಯುತ್ಸುವನು ಸರ್ವಾಧಿಕಾರದಲಿ॥ ೭

ವರ ಮುನೀಂದ್ರರ ನಿಖಿಳ ದೇಶಾಂ
ತರದ ಭೂಸುರವರ್ಗವನು ಸ
ತ್ಕರಿಸಿದನು ಗೋ ಭೂಮಿ ವಸನ ಹಿರಣ್ಯದಾನದಲಿ॥

---

[1] ವಾಸರವ * ಈ ಪದ್ಯ (ಖ) ಪ್ರತಿಯಲ್ಲಿಲ್ಲ. (ಕ). [2] ಹ (ಕ). [3] ನೆಸಗಿದನಂದು ಯಮಸೂನು (ಕ), ತಂದನು ಕೃಷ್ಣ ನಸುನಗುತ (ಖ). [4] ರಾಳಕನ, ಜಾಳಕನ (ಖ.ಫ). [5] ವಾ (ಖ).

ಪರಿಜನವ ಪುರಜನವ ರತ್ನಾ
ಕರಪರೀತ ಮಹೀಜನವನಾ
ದರಿಸಿದನು ವೈಭವವಿಹಿತ ಸನ್ಮಾನದಾನದಲಿ ‖ ೮

ಆ ಸುಯೋಧನನರಮನೆಯನವ
ನೀಶ ಹೊಕ್ಕನು ಪವನಸುತ ದು
ಶ್ಶಾಸನನ ಸದನವನು ಪಾರ್ಥಗೆ ಕರ್ಣಭವನದಲಿ ।
ವಾಸವಾದುದು ಯಮಳರಿಗೆ ದು
ಶ್ಶಾಸನಾನುಜರರಮನೆಗಳುಳಿ
ದ್ವೈಸುಮನೆ ಭಂಡಾರ[1]ವಾದುದು ಭೂಪ ಕೇಳೆಂದ[1] ‖ ೯

ಮನ್ನಣೆಯಲಿ ಯುಯುತ್ಸು ಹೊಕ್ಕನು
ತನ್ನ ಮನೆಯನು ಭೀಷ್ಮ ಗುರುಕೃಪ
ರುನ್ನತಾಲಯವಾಯ್ತು ನೃಪನ ಪಸಾಯ್ತಸಂತತಿಗೆ ।
ಮುನ್ನಿನವರೇ ಮಂತ್ರಿ ಸಚಿವರು
ಮುನ್ನ[2]ದಾವಂಗಾವ[2]ಪರುಠವ
ಭಿನ್ನವಿಲ್ಲದೆ ಪೌರಜನವೆಸೆದಿರ್ದುದಿಭಪುರಿಯ ‖ ೧೦

ಅರಸು ಧರ್ಮಜನಾದ ನಮಗಿ
ನ್ನುರವಣಿಪ ಮನ ಬೇಡ ಬೇಡು
ತ್ತರಿಸುವಿಹಪರವೆರಡ ಪಡೆದವು ನಿಖಿಳ ಜಗ ಹೊಗಳೆ ।
ಪರಿಮಿ[3]ತದ ಜನ ತಮ್ಮ ಸುಬಲವ[3]
ನಿರದೆ ಮಾಡುವೆನೆಂದು ಮುನಿಜನ
ಧರಣಿಸುರರೊಳಗಾದ ಪುರಜನರೊಲಿದು ಹರಸಿದರು ‖* ೧೧

---

[1] ಸರ್ವಾಭರಣಕನುವಾಯ್ತು (ಖ), ಕೊಟ್ಠಾರಕ್ಕೆ ಸಮವಾಯ್ತು (ಟ.ದ.ಪ). [2] ವಲ್ಲಿಂದಾದ (ಕ), ವಾರಿಂಗಾವ (ಖ). [3] ತದಿ ತದ್ಧರ್ಮ ಸುಲಭವ (ಖ). ತದ ಜನ ತಮ್ಮ ಸುಲಭವ (ಟ) * ಈ ಪದ್ಯಗಳಾದಮೇಲೆ (ಕ). ಪ್ರತಿಯಲ್ಲಿ ಮುಂದಿನ ಪದ್ಯಗಳು ಕ್ರಮವಾಗಿ ಹೆಚ್ಚಾಗಿವೆ :—

ಗೌಳ ಬರ್ಬರ ಮಗಧ ಸಿಂಧು ನೆ
ಪಾಳವಾಂಧ್ರ ವಿದೇಹ ಕುರು ಮಳೆ
ಯಾಳ ವತ್ಸ ತ್ರಿಗರ್ತ ಮತ್ಸ್ಯ ವಿದರ್ಭ ಕರ್ನಾಟ ।
ಮಾಳ ಪಂಗ ಕಿರಾತ ಥಳಿ ಬಂ
ಗಾಳ ಜೋನೆಗ ಚೀನ ಖರ್ಪರ
ಚೋಳ ಕೊಡಗ ನೃಪಾಲ ಕೊಂಕಣ ಕರುಷ ಮಹರಾಷ್ಟ್ರ ।

ಬಳಿಕ ಭೀಷ್ಮನ ಬಾಣಶಯನ
ಸ್ಥಳಕೆ ಧರ್ಮಜ ಬಂದು ಧರ್ಮಂ
ಗಳನು ಕೇಳಿದು ರಾಜಧರ್ಮ [1]ಸಮಸ್ತಧರ್ಮವನು[1] ।
ತಿಳಿದನಗ್ಗದ ದಾನಧರ್ಮಾ
ವಳಿಯನಾತನ ರಾಜ್ಯಪಾಲನ
ನಳ ನಹುಷ ಭರತಾದಿ ಭೂಪರ ಗತಿಗೆ ಗುರುವಾಯ್ತು ॥ ೧೨

ಕದನದಲಿ ಕಯ್ಯಾರೆ ದೈತ್ಯರ
ಸದೆದು ಭೂಭಾರವನು ಪರಹ
ಸ್ತದಲಿ ಕಟ್ಟಿಸಿ ಕೊಟ್ಟಭಾಷೆಯನುತ್ತರಾಯೆನಿಸಿ ।
ನದಿಯ ನಂದನನನು ಪರಾ[2]ಸಂ
ದದಲಿ[2]ಸೇರಿಸಿ ಪರಮ ಪರಿತೋ
ಷದಲಿ ಪಯಣವ ಮಾಡಿದನು ಮುರವೈರಿ ನಿಜಪುರಿಗೆ ॥† ೧೩

ಯಮಸುತನ ತಕ್ಕೈಸಿ ಭೀಮನ
ಮಮತೆಯನು ಭುಲ್ಲೈಸಿ ಪಾರ್ಥನ
ನಮಿತ ಮಕುಟವ ನೆಗಹಿ ಪುಳಕಾಶ್ರುಗಳ ಪೂರದಲಿ ।

---

ಭೂಸುರರ ಋಷಿಗಳನು ದಿಗ್ಧರ
ಣೀಶರನು ಮನ್ನೆಯರ ದಿಕ್ಕಿನ
ದೇಶದೇಶದ ಮಂಡಳೀಕರುಳಿದ ದೇಶವನು ।
ಕಾಶಿ ಮೊದಲಾದಖಿಳ ತೀರ್ಥಾ
ವಾಸಿಗಳ ಕಳುಹಿದರು ಧರ್ಮಜ
ರಾ ಸಹೋದರರೊಡನೆ ರಾಜ್ಯವನಾಳಿದನು ನೃಪತಿ ॥

ಹರಿಯ ಬಸುರಲಿ ಸಕಲ ಲೋಕದ
ವಿರಳವಡಗಿದವೋಲು ಭಾರತ
ಶರಧಿಯೊಳಡಗಿದವನೇಕಪುರಾಣ ಕಾವ್ಯಗಳು ।
ಪರಮಭಕ್ತಿಯೊಳೀ ಕೃತಿಯನಾ
ದರಿಸಿ ಕೇಳಿದ ನರರ ದುರಿತಾಂ
ಕುರಕೆ ಬೇಗೆಯ ದಾಳಿಯೆಂದರುಹಿದನು ಭೂಪತಿಗೆ ॥ (ಟ.ದ.ಪ.)

[1] ಸದ್ಧರ್ಮವೋಕ್ಷವನು (ಖ). ಪರೋಕ್ಷಧರ್ಮವನು (ಪ). [2] ಪರ ವಿಧಿಯ (ಕ). † ಇಲ್ಲಿಗೆ (ಖ). ಪ್ರತಿಯಲ್ಲಿ ಭಾರತವು ಮುಗಿದಿದೆ.

ಯಮಳರನು ಬೋಳೈಸಿ ರಾಯನ
ರಮಣಿಯನು ಸಂತೈಸಿ ವಿದುರ
ಪ್ರಮುಖರನು ಬೀಳ್ಕೊಟ್ಟು ಬಿಜಯಂಗೈದನಸುರಾರಿ ॥ ೧೪

ದೇವ ದುಂದುಭಿರವದ ಗಗನದ
ಹೂವಳೆಯ ಪೂರದ ಸಮಸ್ತ ಜ
ನಾವಳಿಯ ಜಯಜೀಯ ನಿರ್ಘೋಷದ ಗಡಾವಣೆಯ ।
ದೇವಕಿಯ ವಸುದೇವ ರುಕುಮಿಣಿ
ದೇವಿಯಾದಿಯ ಹರುಷದಾವಿ
ರ್ಭಾವ ಮಿಗೆ ನಿಜಪುರವ ಹೊಕ್ಕನು ವೀರನಾರಾಯಣರ ॥* ೧೫

ಭವದುರಿತಹರವಕಟ ಹರಿನಾ
ಮವನು ನೆನೆವರು ಕಾಲಚಕ್ರದ
ಜವನ ಬೇಗೆಯ ಜುಣುಗಿ ಜಾಱುವರಖಿಳ ಮಾನವರು ।

---

* ಇಲ್ಲಿಂದ ಮುಂದಕ್ಕೆ ಪದ್ಯಗಳ ಕ್ರಮವು ಬೇರೆಬೇರೆ ಪ್ರತಿಗಳಲ್ಲಿ ಬೇರೆಬೇರೆ ರೀತಿಯಲ್ಲದೆ. ಎಲ್ಲಾ ಪ್ರತಿಗಳಲ್ಲೂ ಇಲ್ಲದೆ, ಮೂಲಪಾಠವಲ್ಲದಿರಬಹುದೆಂದು ತೋರುವ ಪದ್ಯಗಳನ್ನು, ಮುಂದೆ ಅಡಿ ಟಿಪ್ಪಣಿಯಾಗಿ ಕೊಟ್ಟಿದೆ. ಅವು ಯಾವ ಪ್ರತಿಗಳಲ್ಲಿರುವುವೆಂಬುದನ್ನು ಪಕ್ಕದಲ್ಲಿ ಸಂಕೇತಾಕ್ಷರಗಳಿಂದ ಗುರುತಿಸಿದೆ. ಬೇರೆ ಬೇರೆ ಪ್ರತಿಯಲ್ಲಿ ಇವುಗಳು ಬರುವ ಕ್ರಮವನ್ನು ಸೂಚಿಸುವ ಪಟ್ಟಿಯೊಂದನ್ನು ಅನುಬಂಧದಲ್ಲಿ ಕೊಡಲಾಗುವುದು.

ವೇದನಾಲ್ಕರ ಸಾರವಿದು ಶಾ
ಸ್ತ್ರಾದಿಹದಿನಾಱಱ ಸುಸಂಚದ
ಭೇದವಿದು ಸಕಲಾಗಮದ ನೆಲೆವೀಡು ಠಾಣವಿದು ।
ಸೋದಿಸಿದ ಹದಿನೆಂಟು ಪೌರಾ
ಣಾದಿಗಳ ಸರ್ವಸ್ವನಿಕರವ
ಬಾದರಾಯಣನೊಲಿದು ಸತ್ಕೃತಿಯೆನಸಿ ರಚಿಸಿದನು ॥ (ಕ.ಪ).

ಅರಸ ಕೇಳೈ ಸಕಲ ವೇದದ
ತಿರುಳೆನಿಪ ಭಾರತದ ಕಥೆಯನು
ವಿರಚಿಸಿದ ಜಗದಘವ ಸಂಹರಿಸಲ್ಕೆ ಕೃತಿಯೆನಸಿ ।
ಹರಹಿದನು ತ್ರೈಲೋಕ್ಯದೊಳಗಾ
ಪರಮವೇದವ್ಯಾಸಮುನಿ ಮತ
ವಱಿಯೆ ಚಿತ್ರವನಖಿಳಲೋಕಾಲೋಕಜನವಱಿಯೆ ॥ (ಕ).

ಕವಿಕುಮಾರವ್ಯಾಸಸೂಕ್ತದ
ಸವೆಯುದಮೃತವನೊಲಿದೊಲಿದು ಸು
ಶ್ರವಣದಲಿ ಕುಡಿಕುಡಿದು ಪದವಿಯ ಪಡೆವುದೀ ಲೋಕ ‖ ೧೬

ಶ್ರೀಮದಮರಾಧೀಶ ನುತಗುಣ
ತಾಮರಸಪದ ವಿಪುಳನಿರ್ಮಳ
ನಾಮನನುಪಮ ನಿಖಿಳಯತಿಪತಿದಿವಿಜವಂದಿತನು ।
ರಾಮನೂರ್ಜಿತನಾಮ ಸುಧೆಯಾ
ರಾಮನಾಹವಭೀಮ ರಘುಕುಲ
ರಾಮ ಪಾಲಿಸುವೊಲಿದು ಗದುಗಿನ ವೀರನಾರಯಣ ‖ ೧೭

---

ಹರನ ಸಭೆಯೊಳು ಕೇಳಿರೈ ತ್ರಿಪುರ
ಹರನ ಸಭೆಯೊಳು ಸಕಲ ವಿದ್ಯಾ
ಧರರ ಸಭೆಯೊಳು ಕಮಲಭವನುದ್ದಂಡ ಸಭೆಯೊಳಗೆ ।
ಸುರಪತಿಯ ಸಭೆಯೊಳಗೆ ಪಾವಕ
ಹರಿಯನಿಜ ಸಭೆಯೊಳಗೆ ನೈರುತಿ
ವರುಣ ಸಭೆಯಲಿ ಮೆಱೆವುದೀ ಭಾರತಕಥಾಮೃತವು ‖ (ಕ.)

ಹರಿಯ ಸಭೆಯಲಿ ರಾಜರಾಜನ
ವರಸುಸಭೆಯಲಿ ಮಾಟುವೀಶನ
ಪರಮಸಭೆಯಲಿ ಯಕ್ಷ ರಾಕ್ಷಸ ಗರುಡಕಿನ್ನರರ ।
ಹರಿಯ ಸಭೆಯಲಿ ನಾಗಲೋಕದ
ಗರುವಸಭೆ ಮೊದಲಾಗಿ ಪತಿ
ಕರವೆನಿಸಿ ತ್ರಿಜಗವ ಪಸರಿಸಿತ್ತೆಲೆಯರಸ ಕೇಳೆಂದ (ಕ.ಟ.ಪ.)

ಗಿರಿಜೆಯೋಲಗದಲ್ಲಿ ಭಾರತ
ಸಿರಿಯ ಸಭೆಯಲಿ ಭಾರತವು ವಾಕ'
ಸರಸತಿಯರಾಸ್ಥಾನದಲಿ ಭಾರತಕಥಾಮೃತವು ।
ವರ ಶಚಿಯರೂರ್ವಶಿಯರಾದಿಯ
ಸುರಪತಿಯರೊಗ್ಗಿನಲಿ ಭಾರತ
ವರಕಥಾಪೀಯೂಷ ರಂಜಿಸಿತೆಂದನಾ ಮುನಿಪ (ಕ.ಪ.)

ನಿಮ್ಮ ಕಾರುಣ್ಯಾವಲೋಕವ
ನೆಮ್ಮ ಮೇಲುಂಟಾಗಿ ಭಾರತ
ರಮ್ಯವೆನಿಸುವ ಕಥೆಯ ಕೇಳಿದಡ್ಕೈದೆ ವಿಸ್ತರಿಸಿ ।
ನಿರ್ಮಲನವಾಯ್ತೆನ್ನ ತನು ಸ
ದ್ಧರ್ಮವೈಶಂಪಾಯ ನಿಮ್ಮನು
ಬ್ರಹ್ಮರಥಗೊಳಬೇಕೆನುತ ಹೊಗಳಿದನು ಭೂಪಾಲ (ಕ.ಪ.)

ಅರಸ ವೈಶಂಪಾಯನಿಗೆ ನಿಜ
ಕರವ ಮುಗಿದು ಸುವರ್ಣವಸ್ತ್ರಾ
ಭರಣ ಗೋವ್ರಜ ಭೂಮಿ ಕನ್ಯಾದಾನ ಮಣಿಗಣದಿ।
ಹಿರಿದು ಪರಿಯಲಿ ಮನದಣಿವವೋ
ಲುರುತರದ ದ್ರವ್ಯಾದಿಗಳ ಭೂ
ಸುರರಿಗಿತ್ತನು ರಾಯ ಜನಮೇಜಯಮಹೀಪಾಲ॥ ೧೮

ಸರ್ಪಯಾಗದೊಳಾದ ಕರ್ಮದ
ದರ್ಪವನು ಕೆಡೆಯೊದೆದು ಬೆಳಗಿದ
ನುಪ್ಪರದ ರವಿತೇಜದಲಿ ಸುರನರರು ಬೆಚಗಾಗೆ।

---

ಸನಕ ಕಶ್ಯಪ ಜಹ್ನು ಜೈಮಿನಿ
ವಿನುತ ವಿಶ್ವಾಮಿತ್ರನಾಂಗಿರ
ಸನು ಸುಕಶ್ಯಪ ವತ್ಸ ಕುತ್ಸನು ಗಾರ್ಗ್ಯ ಗೌತಮನು।
ಘನವೆನಿಪ ವಾಲ್ಮೀಕಿ ವಾಸಿ
ಷ್ಠನನು ವೇದವ್ಯಾಸ ಮೊದಲಾ
ದನಿಬರನು ಜನಮೇಜಯನು ಮನ್ನಿಸಿದನುಚಿತದಲಿ. (ಕ.ಪ.)

ಸಕಲ ಋಷಿಮತದಲಿ ಕಥಾನಾ
ಯಕನ ಗಂಧಾಕ್ಷತೆಯೊಳರ್ಚಿಸಿ
ಮಕುಟಕರ್ಣಾಭರಣವೆನಿಸುವ ವಸ್ತ್ರ ಕನಕವನು।
ಭಕುತಿಯಿಂದಲಿಯರ್ಘ್ಯಪಾದ್ಯಾ
ನಿಕರದಲಿ ಮನ್ನಿಸಿದರಾ ಮುನಿ
ಯುಕುತಿ ಮಿಗೆ ಹರಸಿದನು ಜನಮೇಜಯ ಮಹೀಪತಿಯ॥ (ಕ.ಪ.)

ಮುನಿಗಳೆಂಬತ್ತೆಂಟು ಸಾವಿರ
ಘನಕಥಾಪೀಯೂಷವನು ಕೇ
ಳ್ದನಿಬರಿತ್ತರು ಸೂತ ಮನದಣಿಯಲು ಸುವಸ್ತುಗಳ।
ವನವನಂಗಳ ಬಂದು ತಾಪಸ
ರನಿಬರಾಸ್ವಸ್ಥಾನಸಂಗತ
ರೆನಿಸಿ ಭಾರತಕಥೆಯ ಕೊಂಡಾಡಿದರು ಮನದಣಿಯೆ॥ (ಕ.ಪ.)

ಕೇಳು ಜನಮೇಜಯ ನೃಪತಿ ಸಿರಿ
ಲೋಲ ಕಥೆಯಿದನಾದರಿಸಿಯಾ
ಕರ್ಣಿಸಿದರೆ ಶತಯಾಗಫಲವಹುದಮರಲೋಕದಲಿ।
ಲೋಲಲೋಚನೆಯರ ಸಮೇಳದ
ಲಾಳುವರು ಹದಿನಾಲ್ಕುಲೋಕದ
ರಾಳಿಗೆಲಸವ ಮಾಡುವರು ತೆತ್ತೀಸಕೋಟಿಗಳ॥ (ಕ.)

ತಪ್ಪದೀ ಭಾರತವ ಕೇಳ್ದಂ
ಗಪ್ಪುದಮರಸ್ತ್ರೀಕದಂಬದೊ
ಳೊಪ್ಪವಿಂದ್ರನ ಪದವಿಯೆಂದನು ಸೂತ ಕೈಮುಗಿದು॥ ೧೯

ವೇದಪಾರಾಯಣದ ಫಲ ಗಂ
ಗಾದಿ ತೀರ್ಥಸ್ನಾನಫಲ ಕೃ
ಚ್ಛ್ರಾದಿ ತಪಸಿನ ಫಲವು ಜ್ಯೋತಿಷ್ಟೋಮಯಾಗಫಲ।

---

ಧರೆಯೊಳೀ ಸತ್ಕಥೆಯ ಕೇಳಿದ
ನರರ್ಗೆ ಸಕಲೈಶ್ವರ್ಯಸಂತತಿ
ವರಶುಭೋದಯ ಭುಕ್ತಿ ಮುಕ್ತಿಯನೀವುದನವರತ।
ಹರನ ಸಾರೂಪ್ಯವನು ಕೇಳ' ಮುರ
ಹರನ ಸಾಲೋಕ್ಯವನು ಭಾರತಿ
ವರನ ಸಾಯುಜ್ಯವನು ಪಡೆವರು ನೃಪತಿ ಕೇಳೆಂದ॥ (ಕ.)

ಪುಣ್ಯಕಥೆಯನು ಪೊಗಳ್ದ ಜನರಿಗೆ
ಗಣ್ಯರೈಶ್ವರ್ಯವನು ಹರಿ ಕಾ
ರುಣ್ಯದಲಿ ಕೊಟ್ಟಿಹಪರಂಗಳಲ್ಲೈದೆ ಸಲಹುವರು।
ಹೆಣ್ಣ ತಲೆಗೇರಿಸಿ ಮೆಱೆವ ಮು
ಕ್ಕಣ್ಣನಿಷ್ಟವನೀವನೀ ಲಾ
ವಣ್ಯಮಯ ಸತ್ಕೃತಿಯ ಕೊಂಡಾಡದವರಾರೆಂದ॥ (ಕ.)

ಸರಸಿಜೋದ್ಭವನರಸಿ ಭಾರತಿ
ಹರಿಯ ವಧು ಗೋಮಿನಿಯ ಸಭೆಯಲಿ
ಸುರಸತಿಯರಾಸ್ಥಾನದಲಿ ದಿಗ್ವನಿತೆಯರ ಹೊರೆಯ।
ವರವನಿತೆ ಶಚಿದೇವಿಯೂರ್ವಶಿ
ಯರ ಸಮೀಪದ ರಂಭೆಯಿದಿರಲಿ
ವರಕಥಾಪೀಯೂಷಪಾನದೊಳಾದವೊಲವಿನಲಿ॥ (ಕ.)

ವಿಪ್ರಜನರಾದರಿಸಿ ಕೇಳ
ಲ್ಕಪ್ಪುದೈ ಸಚ್ಚರಿತ ಸದ್ಗುಣ
ಸುಪ್ರತಿಷ್ಠಿತವಪ್ಪ ಪುತ್ರ ಕಳತ್ರ ಸಂಪದವು।
ಗೊಪ್ಪವೆನಿಸುವ ಶ್ರುತಿಸುಯೋಗ್ಯತೆ
ಕ್ಷಿಪ್ರದಲಿ ಕೈಸಾರುವುದು ತಾ
ವೊಪ್ಪವರಲೈ ಬ್ರಹ್ಮಸಭೆಯೊಳಗೆಂದನಾ ಮುನಿಪ॥ (ಕ.)

ಹೇಮಖುರಶೃಂಗಾಭರಣದಲಿ
ಕಾಮಧೇನು ಸಹಸ್ರಕಪಿಲೆಯ
ಸೋಮ ಸೂರ್ಯಗ್ರಹಣದಲಿ ಸುರನದಿಯ ತೀರದಲಿ।

ಮೇದಿನಿಯನೊಲಿದಿತ್ತ ಫಲವ
ಸ್ತ್ರಾದಿ ಕನ್ಯಾದಾನಫಲವಹು
ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ ‖ ೨೦

ಇತಿ ಶ್ರೀಮದಚಿಂತ್ಯ ಗದುಗಿನ ವೀರನಾರಾಯಣನ ಚರಣಾರವಿಂದ
ಮಕರಂದ ಮಧುಪಾನ ಪರಿಪುಷ್ಟ ವಚಷ್ಟಟ್ಪದೀನಿಕಾಯ
ಶ್ರೀಮತ್ಕುಮಾರವ್ಯಾಸಯೋಗೀಂದ್ರವಿರಚಿತಮಪ್ಪ
ಕರ್ಣಾಟಭಾರತಕಥಾಮಂಜರಿಯೊಳ್‌
ಗದಾಪರ್ವಂ ಸಮಾಪ್ತಂ.

---

ಶ್ರೀಮುಕುಂದಾರ್ಪಣವೆನಿಸಿ ಶತ
ಭೂಮಿದೇವರಿಗಿತ್ತ ಫಲವಹು
ದೀ ಮಹಾಭಾರತದೊಳೊಂದಕ್ಷರವ ಕೇಳ್ದರಿಗೆ‖ (ಕ.)

ರಾಮ ಮಂಗಳನಾಮ ಪ್ಲವಗ
ಸ್ತೋಮ ಭವಕುಲಭೀಮ ಸುಗುಣೋ
ದ್ದಾಮ ಜಯಸಂಗ್ರಾಮ ಸೀತಾರಾಮ ನಿಸ್ಸೀಮ।
ಸಾಮಗಾನಪ್ರೇಮ ರಿಪುನಿ
ರ್ಧೂಮಕಾರುಣ್ಯಾಭಿರಾಮನೆ
ರಾಮ ರಕ್ಷಿಸು ಬೇಗ ದಶರಥರಾಮನೊಲಿದೆನ್ನ ‖ (ಕ.)

# ಅನುಬಂಧ

---

## ಬೇರೆ ಬೇರೆ ಪ್ರತಿಗಳಲ್ಲಿ ಗದಾಪರ್ವದ ಹದಿಮೂರನೆಯ ಸಂಧಿಯ ಕೊನೆಯ ಪದ್ಯಗಳ ಕ್ರಮವನ್ನು ತಿಳಿಸುವ ಪಟ್ಟಿ.

(ಖ.ಫ.ತ.) ಪ್ರತಿಗಳಲ್ಲಿ ಈ ಭಾಗವಿಲ್ಲ.

| ಪದ್ಯಗಳು | ಕ. | ಅಂಗೀಕೃತಪಾಠ | ಗ. | ಚ.ದ. | ಪ |
|---|---|---|---|---|---|
| ದೇವದುಂದುಭಿರವದ .... | ೧೭ | ೧೫ | ೧೫ | ೧೮ | ೧೯ |
| ವೇದನಾಲ್ಕರ ಸಾರವಿದು .... | ೧೮ | .... | ೧೭ | ೨೦ | ೨೦ |
| ಅರಸ ಕೇಳೈ ಸಕಲ ವೇದದ .... | ೧೯ | ... | .... | .... | .... |
| ಹರನ ಸಭೆಯೊಳು ಕೇಳಿರೈ .... | ೨೦ | .... | .... | .... | .... |
| ಹರಿಯ ಸಭೆಯುಲ .... | ೨೧ | .... | ೧೮ | ೨೧ | ೨೧ |
| ಗಿರಿಜೆಯೋಲಗದಲ್ಲಿ .... | ೨೨ | .... | .... | .... | ೨೨ |
| ನಿಮ್ಮ ಕಾರುಣ್ಯಾವಲೋಕನ .... | ೨೩ | .... | .... | .... | ೨೩ |
| ಸನಕ ಕಶ್ಯಪ ಜಹ್ನು ಜೈಮಿನಿ .... | ೨೪ | .... | .... | .... | ೨೪ |
| ಸಕಲಋಷಿಮತದಲಿ .... | ೨೫ | .... | .... | .... | ೨೫ |
| ಸರ್ಪಯಾಗದೊಳಾದ .... | ೨೬ | ೧೯ | .... | ೧೯ | .... |
| ಮುನಿಗಳೆಂಬತ್ತೆಂಟು .... | ೨೭ | .... | .... | .... | ೨೬ |
| ಕೇಳು ಜನಮೇಜಯ .... | ೨೮ | .... | .... | .... | .... |
| ಧರೆಯೊಳೀ ಸತ್ಕಥೆಯ .... | ೨೯ | .... | .... | .... | .... |
| ಪುಣ್ಯಕಥೆಯನು ಪೊಗಳ್ದ .... | ೩೦ | .... | .... | .... | .... |
| ಸರಸಿಜೋದ್ಭವನರಸಿ .... | ೩೧ | .... | .... | .... | .... |
| ವಿಪ್ರಜನರಾದರಿಸಿ .... | ೩೨ | .... | .... | .... | .... |
| ಭವದುರಿತಹರ .... | ೩೩ | ೧೬ | ೧೬ | .... | ೨೭ |
| ವೇದಪಾರಾಯಣದ ಫಲ .... | ೩೪ | ೨೦ | .... | ೨೪ | ೨೮ |
| ಹೇಮಖುರಶೃಂಗಾಭರಣ .... | ೩೫ | .... | .... | .... | .... |
| ಚೋರ ನಿಂದಿಸಿ ಶಶಿಯ .... | ೩೬ | .... | .... | .... | .... |
| ಶ್ರೀಮದಮರಾಧೀಶ .... | ೩೭ | ೧೭ | ೧೯ | ೨೨ | ೩೦ |
| ರಾಮ್ಮಮಂಗಳನಾಮ .... | ೩೮ | .... | .... | .... | .... |
| ಅರಸ ವೈಶಂಪಾಯನಿಗೆ .... | ೩೯ | ೧೮ | .... | ೨೩ | ೨೯ |

WD 5962—GBPM—1,000.